✻ ಶ್ರೀಃ ✻

ಶ್ರೀಮನ್ಮಧ್ವಸಿದ್ಧಾಂತಗ್ರಂಥಾಲಯ.

ಉಡುಪಿ.



ಶ್ರೀದವಿಠಲ, ಶ್ರೀಶವಿಠಲ, ಶ್ರೀಪತಿವಿಠಲ, ಪ್ರಸನ್ನ
ವೇಂಕಟ, ಮೋಹನವಿಠಲ, ವ್ಯಾಸವಿಠಲ
ಇವೇ ಮೊದಲಾದ ಅಂಕಿತಗಳುಳ್ಳ

# ದಾಸರಪದಸಂಗ್ರಹವು



ಪ್ರಥಮಾವೃತ್ತಿ.

ಉಡುಪಿ ಶ್ರೀಕೃಷ್ಣಮುದ್ರಣಾಲಯದಲ್ಲಿ ಮುದ್ರಿಸಲ್ಪಟ್ಟಿತು.

1926.

ಬೆಲೆ: ೧೦ ಆಣೆ.

(All Rights Reserved.)

# ಉಪೋದ್ಘಾತವು.

ಆಸ್ತಿಕಮಹಾಶಯರೇ !

ಅಪರೋಕ್ಷಜ್ಞಾನಿಗಳಾದ ದಾಸರುಗಳು ತಮ್ಮ ಜೀವಿತಕಾಲವನ್ನೆಲ್ಲಾ ಲೋಕಹಿತಕ್ಕಾಗಿಯೇ ಉಪಯೋಗಿಸಿರುವರೆಂಬ ವಿಷಯವು ಸರ್ವರಿಗೂ ವಿದಿತವಾಗಿರುತ್ತದೆ. ಪರಂತು, ಈ ಭೂಮಿಯಲ್ಲವತರಿಸಿ ಒಬ್ಬೊಬ್ಬರೂ ತಮ್ಮ ಪಾಂಚಭೌತಿಕ ದೇಹದಿಂದ ಇರುವ ವರೆಗೂ ತತ್ತ್ವೋಪದೇಶವನ್ನು ಮಾಡುತ್ತಾ, ಅಸಂಖ್ಯಾತ ಜನಗಳನ್ನು ಭಕ್ತಿಮಾರ್ಗಾವಲಂಬಿಗಳಾಗಿ ಮಾಡಿ ಮುಂದಿನವರಿಗೂ ಅನುಕೂಲಿಸುವಂತೆ, ಭಗವತ್ತತ್ತ್ವಗಳಿಂದ ಕೂಡಿದ ಪದ್ಯಗಳನ್ನು ರಚಿಸಿ ಈ ಮುಖದಿಂದ ತಮ್ಮ ಕೀರ್ತಿದೇಹವನ್ನು ಭರತಭೂಮಿಯಲ್ಲಿ ಸ್ಥಾಪಿಸಿರುವರು.

ಆದರೆ ನಿಜವಾಗಿ ಪ್ರಕಾಶವಿದ್ದು ಧೂಳಿನಿಂದ ಮಲಿನವಾದ ಕನ್ನಡಿಯನ್ನು ವರೆಸಿದರಲ್ಲವೆ ಪ್ರಕಾಶಕ್ಕೆ ಬರುವುದು; ಹಾಗಲ್ಲದೆ, ಹುಣಿಸೆಹಂಚಿನ ಚೂರನ್ನು ಎಷ್ಟು ತಿಕ್ಕಿ ತೊಳೆದರೂ ಪ್ರಕಾಶಕ್ಕೆ ಬರಲಾರದು. ಹಾಗೆಯೇ ಭಗವದನುಗ್ರಹಕ್ಕೆ ಪಾತ್ರರಾಗತಕ್ಕ ಸುಜೀವಿಗಳಾಗಿದ್ದು ಪ್ರಾರಬ್ಧವಶಾತ್ ಮರ್ತ್ಯಲೋಕದ ಸಂಬಂಧದಿಂದ, ದುಷ್ಟಸಂಸರ್ಗದೋಷದಿಂದ ದುರ್ಮಾರ್ಗಿಗಳಾಗಿರುವವರಿಗೆ ಮಾತ್ರ ಎಚ್ಚರಗೊಳಿಸುವುದಕ್ಕಾಗಿ ದಾಸಾರ್ಯರುಗಳು ದೇವರನಾಮಗಳನ್ನು ರಚಿಸಿಟ್ಟಿರುವರು. ಮನಸ್ಸಿನ ನೈಜಸ್ವಭಾವವು ಶುದ್ಧವಾದದ್ದಿದ್ದು, ಹೊಸದಾಗಿ ಸಂಸರ್ಗದೋಷದಿಂದ ನಿಮಿತ್ತಮಾತ್ರ ಉಂಟಾದ ಅಜ್ಞಾನವೆಂಬ ಕಶ್ಮಲವು ದಾಸಾರ್ಯರ ಮುಖದಿಂದ ಬಂದ ದೇವರನಾಮಗಳಲ್ಲಿರುವ ತತ್ತ್ವವೆಂಬುವ ವರಾಹಕೇಸರದಿಂದ ತೊಳೆಯಲ್ಪು ಹೋಗಿ ಶುದ್ಧವಾದೀತಲ್ಲದೆ, ಮನಸ್ಸಿನ ನಿಜಗುಣವೇ ನಾಸ್ತಿಕವಾಗಿದ್ದ ಪಕ್ಷದಲ್ಲಿ ಎಂದಿಗೂ ಸನ್ಮಾರ್ಗಕ್ಕೆ ಅವಲಂಬಿಸದು. ಹಾಗೆಂದು ನಾವು ಸುಜೀವಿಗಳೋ ದುರ್ಜೀವಿಗಳೋ ನಮಗೇಕೆ ಎಂದು ಪ್ರಯತ್ನವನ್ನೇ ಮಾಡದೆ ಉದಾಸೀನರಾಗಿರದೆ ದಾಸಾರ್ಯರ ದೇವರ

ನಾಮಗಳನ್ನವಲೋಕಿಸಿ, ಅವರುಗಳ ಮಾತಿನಲ್ಲಿ ವಿಶ್ವಾಸವುಂಟಾಗಲು, ಆಗಲಾದರೂ ನಿಜವಾಗಿಯೂ ದೇವರ ದಯೆಯು ನಮ್ಮ ಮೇಲೆ ಉಂಟೆಂಬುದನ್ನು ನಂಬಿಕೊಂಡು ಸಮಯವಿದ್ದಾಗಲೆಲ್ಲಾ ದೇವರನಾಮಗಳನ್ನು ನೋಡುತ್ತಾ ಬರಲು, ಸ್ವೈಜದಾರ್ಢ್ಯ ಉಂಟಾಗಿ ಕಾಲಾನುಕಾಲವಲ್ಲಾದರೂ ಶ್ರೀಹರಿಯ ದಯೆಗೆ ಪಾತ್ರರಾಗಬಹುದು. ಈ ಕಾಲದಲ್ಲಿಯೋ ಬರಬರುತ್ತಾ ಸಂಸಾರ ಸಂಬಂಧವಾದ ತಾಪತ್ರಯಗಳೇ ವಿಶೇಷವಾಗುತ್ತ ಬರುತ್ತಿದೆ. ಅನೇಕರಾದವರಿಗೆ ಮನಸ್ಸಿದ್ದರೂ ತಾಪತ್ರಯಗಳಿಗೆ ಸಿಕ್ಕಿದವರಾಗಿ ಸಮಯವೇ ಇಲ್ಲದೆ ಪಶ್ಚಾತ್ತಪ್ತರಾಗುತ್ತಿದ್ದಾರೆ. ಆದುದರಿಂದ ಇಂತಹ ಆದರವುಳ್ಳವರಿಗೆ ದೇವರನಾಮಗಳನ್ನು ಸಂಗ್ರಹಿಸುವ ಕಷ್ಟವಾದರೂ ತಪ್ಪಲಿ ಎಂಬುವ ಅಭಿಪ್ರಾಯದಿಂದ ಛತ್ರದಲ್ಲಿ ಉಂಬುವ ಅನ್ನಕ್ಕೆ ಉಪಚರಿಸುವ ದಾರಿಕಾರನಂತೆ ಲೋಕಹಿತಕ್ಕಾಗಿ ದಾಸಾರ್ಯರುಗಳು ರಚಿಸಿಟ್ಟ ದೇವರನಾಮಗಳನ್ನು ನೂರಾರುವರ್ಷಗಳ ಹಳೆಯ ಪುಸ್ತಕದಿಂದ ಶುದ್ಧಪ್ರತಿಯನ್ನು ಸಂಗ್ರಹಿಸಿ, **ಪುರಂದರದಾಸರು, ವಿಜಯದಾಸರೇ** ಮುಂತಾದ ಅಪರೋಕ್ಷಜ್ಞಾನಿಗಳಂತೆ ಇನ್ನೂ ಅನೇಕರಾದವರಿಂದ ವಿರಚಿತವಾದುವುಗಳನ್ನು, ಅಲ್ಪನಾದ ನನ್ನಿಂದಾಗುವಷ್ಟಾದರೂ ದೇಶಸೇವೆಯನ್ನು ಮಾಡಬೇಕೆಂಬುವ ಉದ್ದೇಶದಿಂದ ಇವನ್ನು ಅಚ್ಚುಹಾಕಿಸುವುದರಲ್ಲಿ ಸಹಾಯಕರಾಗುತ್ತೇವೆಂದು ಭರವಸೆಯನ್ನು ಕೊಟ್ಟ ಮ|| ರಾ|| ಪಾವಂಜೆ ಗುರುರಾಯರವರಿಗೆ ವಹಿಸಿಕೊಟ್ಟಿರುತ್ತೇನೆ. ಇಂತಹ ಸತ್ಕಾರ್ಯಗಳಿಗೆ ಪ್ರೋತ್ಸಾಹಿಸುವಂತೆ ಭಗವಂತನು ತಮ್ಮಗಳಿಗೆ ಪ್ರೇರಿಸಲೆಂದು ಪ್ರಾರ್ಥಿಸುವ.

ಉಡುಪಿ, | ದಾಸಾರ್ಯರ ಭಕ್ತರುಗಳ ಅನುಗ್ರಹಾಕಾಂಕ್ಷೀ,

ತಾ. 9—10—1926. | ಶ್ರೀಪಾದದಾಸ, ಹಂಡೆ, ಶಿವಮೊಗ್ಗಾ.

# ಅನುಕ್ರಮಣಿಕಾ.



**ಸಂಪೂರ್ಣವು.**



ಶ್ರೀಃ

|| ಶ್ರೀಗುರುರಾಜೋ ವಿಜಯತೇ ||

|| ಶ್ರೀವೇಣುಗೋಪಾಲಕೃಷ್ಣಾಯ ನಮಃ ||

# ದಾಸರಪದಗಳು.

## ೧. ರಾಗ ಭೈರವಿ, ಅಟತಾಳ. *

ಇಂದು ಯೆನಗೆ ಗೋ | ವಿಂದ ನಿಮ್ಮ ಪಾದಾರ | ವಿಂದವಾ ತೋರೋ ಮು | ಕುಂದನೇ || ಪಲ್ಲ || ಸುಂದರ ವದನನೆ | ನಂದ ಗೋಪಿಯ ಕಂದ | ಮಂದರೋದ್ಧರ ಆನಂದಾ | ಇಂದಿರೆ ರಮಣಾ || || ಅನುಪಲ್ಲ || ನೊಂದೇನಯ್ಯ | ಭವ | ಬಂಧನದೊಳು ಸಿಲುಕಿ | ಮುಂದೆ ದಾರಿ ಕಾಣದೆ | ಕುಂದಿದೆ ಜಗದೊಳು || ಕಂದನೆಂದು ಯೆನ್ನಾ | ಕುಂದುಗಳೆಣಿಸದೆ | ತಂದೆ ಕಾಯೋ ಕೃಷ್ಣ ಕಂದರ್ಪ ಜನಕನೆ || ೧ || ಮೂಢತನದಿ ಬಲು | ಹೇಡಿಜೀವನನಾಗಿ | ದೃಢ ಭಕುತಿಯನ್ನು | ಮಾಡಲಿಲ್ಲವೊ ಹರಿಯೆ || ನೋಡಲಿಲ್ಲವೊ ನಿನ್ನ | ಪಾಡಲಿಲ್ಲವೊ ಮಹಿಮ | ಗಾಡಿಕಾರ ಕೃಷ್ಣ | ಬೇಡಿಕೊಂಬೆನೊ ನಿನ್ನ || ೨ || ಧಾರುಣಿಯೊಳು ಭೂ | ಭಾರ ಜೀವ ನಾನಾಗಿ | ದಾರಿ ತಪ್ಪಿ ನಡದೆ | ಸೇರಿದೆ ಕುಜನರ || ಆರು ಕಾಯುವರಿಲ್ಲ | ಸೇರಿದೆ ನಿನಗಯ್ಯ | ಧೀರ ವೇಣುಗೋಪಾಲ | ಪಾರಗಾಣಿಸೊ ಈಗ || ೩ ||

## ೨. ರಾಗ ಹಿಂದುಸ್ಥಾನಿ ದೇಶಿ, ಝಾಪುತಾಳ.

ಸಂಜೀವನಗಿರಿಧರ ಪಾಹಿಮಾಂ || ಪಲ್ಲ || ತೇಜ ತೇಜ ಹಾ | ಪುಂಜ ಹನೂಮಂತ | ವರಂ ದೇಹಿಮಾಂ || ಅನುಪಲ್ಲ || ಯಂತ್ರ ಮೂಲಸ್ಥಿತ |

* ಶ್ರೀಮಂತ್ರಾಲಯರಾಯರಿಂದ ವಿರಚಿತ.

ಕಂತು ಪಿತಾಸುತಾ | ಯಂತ್ರೋದ್ಧಾರಕ ಪತೇ | ಪಾಹಿಮಾಂ || ೧ || ಚಕ್ರತೀರ್ಥನಿವಾಸಾ | ಶಕ್ರಾದ್ಯಮರೇಶ | ವಕ್ರಾನನಮೂರುತೀ | ಪಾಹಿಮಾಂ || ೨ || ಮೋಹನವಿಠಲದಾಸ ಸುಪೋಷಕ | ಮೋಹಕ ದೈತ್ಯ ಭಂಜನ ಪಾಹಿಮಾಂ || ೩ || ಶ್ರೀ ||

## ೩. ರಾಗ ಸುರುಟಿ, ಅಟತಾಳ.

ವಾದಿರಾಜ ಮದ್ಗುರುರಾಯ | ಮಾಧವನಂಘ್ರಿ ಆರಾಧಿಸುವ ಧೀರ || || ಪಲ್ಲ || ಭೇದಾರ್ಥಸಿದ್ಧಾಂತ ವಾದಿಗಳಿದಿರಾಗಿ | ಸಾಧಿಸಿ ಸುಜನರ ಮೋದಪಡಿಸುವಂಥ || ೧ || ಮಂಗಳಾಂಗನಂತರಂಗದಿ ನೋಡುತ | ಸಂಗೀತದಲಿ ಪಾಡೆ ಭಂಗ ಓಡಿಸುವಂಥ || ೨ || ನಂದಿವಾಹನ ಅಮರೇಂದ್ರ ವಂದ್ಯ ನಮ್ಮ | ಇಂದಿರಾಪತಿಯೆಂದು ಮಂದರಿಗರುಪುವ || ೩ || ಬುಧರ ಮಧ್ಯದಿ ಸುಹೃದಯರೆನಿಸುವಂಥ | ಸದಾಸುಖನಿಧಿ ಹಯವದನನ್ನ ನಿಜದಾಸ || ೪ || ಯತಿಶಿರೋಮಣಿ ಸುಖವುಳ್ಳ ವಿಜ್ಞಾನಿ | ಪತಿತರುದ್ಧರಿಸುವ ಮತಿಮಹ ಖತಿದೂರ || ೫ || ನರರಂತೆ ನೀನಲ್ಲ ಸುರರಂತೆ ಹರಿಯಲ್ಲ | ಮರಗಳಂತೆ ಕಲ್ಪತರುವಲ್ಲ ಕೇಳಯ್ಯ || ೬ || ರಘುಪತಿವಿಠಲ ಸಮ್ಯೋಗನಾಗಿ ನಿಮಗಿಪ್ಪ | ಅಗಣಿತ ಗುಣಧಾಮನ್ನಗಲದ ಮನವುಳ್ಳ || ೭ || ಶ್ರೀ ||

## ೪. ರಾಗ ಯದುಕುಲಕಾಂಬೋಧಿ, ಆದಿತಾಳ.

ಬಾಗಿ ಭಜಿಸಿರೋ ರಾಘವೇಂದ್ರಯತಿಯಾ | ಕೊಡುವನು ಸದ್ಗತಿಯಾ || ಪಲ್ಲ || ಯೋಗಿಕುಲವರ್ಯ ಭಾಗವತರ ಪ್ರಿಯಾ | ಸತ್ಕವಿಕುಲಗೇಯಾ || ಅನುಪಲ್ಲ || ಯತಿಸುಧೀಂದ್ರಕರ | ಸುತಾದ್ಭುತ ಸುಚರ್ಯ || ಪುಸಿಯಲ್ಲವೊ ಖರೆಯಾ | ಶ್ರಿತಜನನುತ ಕಾಮಿತತರು ಸುರಧೇನೂ | ಚಿಂತಾಮಣಿ ತಾನೂ || ಶತಪರ್ವತವತ್ಸರ ಬೃಂದಾವನದೀ | ನಲಿನಲಿವನು ಮುದದೀ || ಚತುರವಿಧ ಸುಪುರುಷಾರ್ಥವ ತಾ ಕೊಡುವಾ | ನಂಬಿದರಘ ತಡೆವಾ || ೧ || ವರಮಂತ್ರಾಲಯ ಸುರುಚಿರ ಗೃಹದಲ್ಲೀ | ವರಾಹಜತೀರದಲೀ || ಮೆರೆವ ಮಂದರನು ಕರೆದು ಪಾಪ

ಕಳೆವಾ | ಮನದಲಿ ತಾ ಪೊಳೆವಾ || ಸರ್ವಜ್ಞರು ಮೊದಲಾದ ಮುನಿಗಳಿಲ್ಲೀ | ಇಪ್ಪರು ಮುದದಲ್ಲೀ || ದುರಾಭಿಮಾನದಿ ಬಾರದವನೆ ಕೆಟ್ಟಾ | ಬರಲೀವಸುಯಿಷ್ಟಾ || ೨ || ಮಧ್ವಮುನೀ ಸುಮತಾಬ್ಧಿಪೂರ್ಣಚಂದ್ರ | ಸದ್ಗುಣಗಣಸಾಂದ್ರ || ಸದ್ವೈಷ್ಣವಗುರು ಕುಮತಾದ್ರಿಗೆ ಕುಲಿಶಾ | ಕಾಷಾಯವಾಸ || ಸಿದ್ಧಾಂತಸುಧಕೆ ಪರಿಮಳಾಖ್ಯ ಗ್ರಂಥಾ | ಮಾಡಿದ ದಯವಂತಾ || ಮುದ್ದು ಅಭಿನವಜನಾರ್ದನವಿಟ್ಠಲನಾ | ಸದ್ಭಕ್ತವರೇಣ್ಯಾ || ಬಾಗಿ ಭಜಿಸಿರೋ || ೩ || ಶ್ರೀ° ೩ ||

### ೫. ರಾಗ ಜುಂಜೂಟಿ, ಅಟತಾಳ.

ನೋಡು ನೋಡು ಟೀಕಾಚಾರ್ಯರ | ಮಾಡು ವಂದನೆಗಳ | ಬೇಡು ವರಗಳನ್ನು || ಪಲ್ಲ || ದುರ್ಮಾಯಿ ಮತಗಳ | ಮರ್ಮ ಭೇದಿಸಿ ಸುಧಾ | ನಿರ್ಮಾಣ ಮಾಡಿದ ಆರ್ಯರಾ || ೧ || ಲಲಿತೋರ್ಧ್ವಪುಂಡ್ರ ಶ್ರೀ | ತುಲಸಿ ಭೂಷಿತ ಕರ್ಣ | ವಿಲಸಿತ ಕಾಷಾಯಧಾರ್ಯರಾ || ೨ || ಯಾವಾಗಲು ವಾಸು | ದೇವವಿಠಲನ್ನ | ಸೇವಿಸುವರ ಭಜಿಸೂವರ || ೩ ||

|| ಶ್ರೀಮಧ್ವೇಶಾರ್ಪಣಮಸ್ತು ||

### ೬. ರಾಗ ಶಂಕರಾಭರಣ, ಅಟತಾಳ.

ನರಹರೇ || ಪಾಹಿಮಾಂ ನರಹರೇ || ಪಲ್ಲ || ನರಹರೆ ನಮಿಪೆ ನಾ ನಿನಗೇ | ನಿನ್ನ | ಚರಿತೆಯಾಶ್ಚರ್ಯ ಕೇಳ್ವರಿಗೇ || ಆಹಾ || ತರಳ ಪ್ರಹ್ಲಾದನ್ನ ಪೊರೆದಹೋಬಲದಲ್ಲಿ | ಮೆರೆವ ಮೂರುತಿ ಶಿರಿವರ ಕರುಣಾಕರ || || ಅನುಪಲ್ಲ || ತಂದೆಯ ಮಾತನು ಮೀರಿ | ನಿತ್ಯಾ | ನಂದಭಜಕರುಪಕಾರಿ | ಯೆಂದು | ಕಂದ ನುಡಿದ ಬಾರಿ ಬಾರಿ || ಆಹಾ || ಮಂದಹಾಸದಲಿ ಆ | ನಂದಮೂರುತಿ ಗೋ | ವಿಂದ ಮುಕುಂದ ಎಂ | ತೆಂದನು ಹರುಷದಿ || ೧ || ನುಡಿ ಕೇಳಾಲೊಲ್ಲ ಇವನೆಂದೂ | ಕರ | ಪಿಡಿದೆಳದನು ಖಳ ಬಂದೂ | ಹೊಡಿ | ಬಡಿಯೆನ್ನುತಲಿ ಹ್ಯೊ ಹ್ಯೊಯೆಂದೂ | ಹೇಳೆ | ಮಿಡುಕುತ ದುರುಳನ ಬಂದೂ || ಆಹಾ || ಮಡದಿ ಬೆಂಬಿಡದಲೆ | ಅಡಿ

ಗೆರಗಿದರೆನ್ನ | ಕಡು ಕೋಪದಿಂದ ಆರ್ಭಟಿಸುತ ಯಿರಲಾಗಿ || ೨ ||
ಬತ್ತೀಸಾಯುಧದಿ ಬಾಧಿಸಲೂ | ಮೇಲ | ಕ್ಕೆತ್ತಿ ಅಂತರಕೆ ಹಾರಿಸಲೂ |
ಬೀಳ | ಲೊತ್ತಿ ಕೊರಳ ಮತ್ತೆ ನೊಸಲು | ತನ್ನ | ಹೆತ್ತಯ್ಯ ಪರ
ನೆಂದೆನಿಸಲೂ || ಆಹಾ || ಮತ್ತತನದಿ ನುಡಿ | ದುತ್ತರ ಕೇಳದೆ | ವತ್ತಿ
ಶ್ರೀಹರಿಸರ್ವೋತ್ತುಮನೆನಲಾಗಿ || ೩ || ಏಸೇಸುಪರಿ ದಂಡಿಸಿದರೂ |
ಜಗ | ದೀಶ ಶ್ರೀಹರಿಗ್ಯಾರು ಯೆದುರೂ | ಭಕ್ತ | ಪೋಷಕ ಇವನಲ್ಲ
ದಾರೂ | ಇಲ್ಲ ಲೇಸಾಗಿತಿಳಿದು ಭ್ಯೆಯದಿರೂ || ಆಹಾ || ಈಶ ಅಹೀಶ
ವಾಣೀಶಾದ್ಯರೆಲ್ಲರು | ದಾಸಾನುದಾಸರು ಶ್ರೀಶಗೆಂದೆಂದನು || ೪ ||
ಯೆಲ್ಲಿಪ್ಪನೋ ನಿನ್ನ ದ್ಯೆವಾ | ಯೆಂದು | ಕಳ್ಳಕೇಳಲುಯೇಕೋಭಾವಾ |
ದಲ್ಲಿ | ಪ್ರಹ್ಲಾದ ಭಕ್ತಸಂಜೀವಾ | ಪೇಳ್ದ | ಸೊಲ್ಲೆಂದು ಖಳ ದುಃಸ್ವ
ಭಾವಾ || ಆಹಾ || ನಿಲ್ಲದವನಬಾಯಲ್ಲಿ ಶಸ್ತ್ರವನಿಕ್ಕಿ | ಯೆಲ್ಲಪರಿಯ
ಬಾಧೆಯೆಲ್ಲವ ಬಡಿಸಿದ || ೫ || ಕರ್ಣಕಠೋರ ಈ ವಾಕಾ | ಕೇಳಿ |
ಸ್ವರ್ಣಕಶಿಪು ಅನೇಕಾ | ಚಿಂ | ತಾರ್ಣವದೊಳುಸೇರಿ ಶೋಕಾ | ಬಟ್ಟು |
ನಿರ್ಣಯಕಾಣ ವಿವೇಕಾ || ಆಹಾ || ತನ್ನೊಳುತಾನೆ ಕಾ | ದೆಣ್ಣೆ ಕುದಿ
ವಪರಿ | ಬನ್ನಬಡುತ ತರಳನ್ನ ನುಡಿಸಿದನು || ೬ || ನಿನ್ನ ವಡೆಯನಿಹ
ಸ್ಥಳವಾ | ತೋರು | ಮನ್ನಿಸು ಈ ಮಾತು ಛಲವಾ | ಬಿಟ್ಟು | ಘನ್ನ
ಘಾತಕನ್ನ ಕುಲವಾ || ಕೆಡಿ | ಪನ್ಯಾಯವ್ಯಾಕೊ ಯೆಮ್ಮೊಳವಾ ||
ಆಹಾ || ಚಿಣ್ಣಾನಪಿಡಿದು ಮತ್ತನ್ಯಚಿಂತೆಯಬಿಟ್ಟು | ಪನ್ನಗಭರಣನ
ಬೆನ್ನಬೀಳೆಲೊ ಯೆಂದ || ೭ || ಕಂದ ನುಡಿದ ಕಂಭದಲ್ಲೀ | ನಮ್ಮ |
ಇಂದಿರೇಶನು ಯಿಪ್ಪನಿಲ್ಲೀ | ಸುರ | ವೃಂದವಂದಿತನು ಯೆಲ್ಲೆಲ್ಲೀ |
ವ್ಯಾಪ್ತ | ಸಂದೇಹವಿಲ್ಲಿದರಲ್ಲೀ || ಆಹಾ || ಎಂದಡಾರ್ಭಟಖತಿ |
ಯಿಂದಲೊದೆಯೆ ಸ್ತಂಭ | ದಿಂದಲುದ್ಭವಿಸಿ ನೀಬಂದಿಯೊ ಕರುಣದಿ ||
|| ೮ || ಸರಸಿಜಜಾಂಡವು ನಡುಗೇ | ಬಂದಾ | ಭರದಲ್ಯಸುರನ ಕೆಮ್ಮು
ಡಿಗೇ | ಕರ | ವಿರಿಸಿ ಸೆಳದೆ ಭೂಮಿ ಅಡಿಗೇ || ಬಿರಿ | ದೊರಸಿ ಬೀರುತ
ಲಡಿಗಡಿಗೇ || ಆಹಾ || ಕರದ ಕೂರುಗುರಿಂದ | ಕರುಳ ಬಗೆದು ನಿನ್ನ |
ಕೊರಳಲ್ಲಿ ಧರಿಸಿದೆ | ಪರಮೋದಾರದಲ್ಲಿ || ೯ || ಸೇರಿ ಅಜಭವ ಮುಖ್ಯ

ಸುರಪಾ | ಮುಖ್ಯ | ಸುರಸಿದ್ಧಮುನಿ ವಾಯುಧನಪಾ | ಮಿಕ್ಕಿ | ಪರಿವಾರ ಗಂಧರ್ವ ಕ್ಷಿತಿಪಾ | ರೆಲ್ಲ | ಕರವ ಜೋಡಿಸಿ ನಿಂದು ಸ್ತುತಿಪಾ || ಆಹಾ || ಪರಿಯಚರಿಯ ಆಶ್ಚರಿಯವೆನುತ ಪುಷ್ಪ | ಸುರಿದು ವ್ಯೋಮರದಲ್ಲಿ ನೆರದು ನಿಂದಿರುವರು || ೧೦ || ಅಳುತೆಂದೀಭಕ್ತರಮೇಲೇ | ನಿನ | ಗಳುಕದಿಪ್ಪರುಧರೆಮ್ಯಾಲೇ | ಯೆನ | ಗಳವಡಲಿಲ್ಲ ಈ ಲೀಲೇ | ಪೇಳ | ಲಳವಲ್ಲವೊ ವ್ಯಾಳೆ ವ್ಯಾಳೇ || ಆಹಾ || ಕುಳಿತು ಸಂತೋಷದಿ ಚಲುವ ಈ ಬಾಲನ್ನ | ಸಲಹಿದೆ ಬಿರಿದಾಂಕ ಶಿರಿಪತಿ ವಿಠ್ಠಲ || ೧೧ ||

## ೩. ರಾಗ ನಾದನಾಮಕ್ರಿಯೆ, ಏಕತಾಳ.

ಹರಹರ ಪುರಹರ ಗಿರಿಜಾಮನೋಹರ | ಸುರವರ ಕರುಣಾಕರಲಿಂಗಾ || || ಪಲ್ಲ || ಶರಣರ ಸುರತರು ವರ ಪಂಪಾಪತಿ | ವಿರುಪಾಂಬಕ ಹರಶಿವಲಿಂಗಾ || ಅನುಪಲ್ಲ || ಮದನದಹನ ಪಂಚ | ವದನ ಕೈಲಾಸದ | ಸದನ ಸದಾಶಿವ ದೇವ ನಮೋ || ಹದಿನಾಲ್ಕುಲೋಕದ ಹದನ ಬಲ್ಲಿದ ಜಿತ | ಕದನಕಲಶ ಹರ ದೇವ ನಮೋ || ೧ || ತಾರಕಪತಿಧರ | ಭೂರಿ ಕೃಪಾಂಬುಧಿ | ತಾರಕಹತಪಿತ ಜಯ ಜಯ ಭೋ || ತಾರಕ ಉಪದೇಶ | ಕಾರಕ ಭವಘನ | ಹಾರಕ ಮೃತ್ಯುಂಜಯ ಜಯ ಭೋ || ೨ || ಶೇಷಾಭರಣ ವಿ | ಭೂಷಿತ ಕಳೆವರ | ಶೇಷಭಕ್ತಪ್ರಿಯ ವಿಭೋ ವಿಭೋ || ಶೇಷಾಭೂಭೃತ್ ಪೋಷಕ ಶ್ರೀವೆಂಕಟೇಶ ಭಜಕರಕ್ಷ ವಿಭೋ ವಿಭೋ || ೩ || ಶ್ರೀ ||

## ೮. ರಾಗ ಪೀಲು, ಆದಿತಾಳ.

ಚಿತ್ತೈಸೈ ಬಿನ್ನೈಸುವೆ ಪರಾಕು || ಪಲ್ಲ || ಸತ್ಯಧರ್ಮ ಸದ್ಗುರುರಾಯಾ || || ಅನುಪಲ್ಲ || ನಿನ್ನ ನಂಬಿದವಧನಮದಾಂಧರಿಗೆ | ಇನ್ಯಾತಕೆ ತೆರಿಯಲಿ ಬಾಯಾ || ೧ || ಕಾಲಹರಣ ಬಲು ಕಷ್ಟವಾಗುತದೆ | ಪಾಲಿಸುವದು ಸತ್ಪಾಥೇಯಾ || ೨ || ಶ್ರೀದವಿಠ್ಠಲಾ ಶ್ರಿತಜನವತ್ಸಲ | ಸಾಧುಸೇವ್ಯ ಸತ್ಕವಿಗೇಯಾ || ೩ || ಶ್ರೀ ||

## ೯. ಶ್ರೀರಾಗ ಛಾಪುತಾಳ.

ಇಂದುಧರನೆ ಬಾರೋ | ಸುರ | ವೃಂದಾವಂದ್ಯನೆ ಬಾರೊ | ಕುಂದಾದೆನ್ನ ಮನಸಿಗೇ | ಮುಕುಂದಪ್ರಿಯನೆ ಬಾರೊ || ಪಲ್ಲ || ರಜತಾದ್ರಿನಿವಾಸನೆ ಬಾರೋ | ಗಜದೈತ್ಯವಿನಾಶನೆ ಬಾರೋ | ಅಜಸುತನೆ ದ್ವಿಜಭಜನೆಯ | ಗೆಡಿಸಿದ ಗಜಮುಖನಯ್ಯನೆ ನೀ ಬಾರೋ || ೧ || ಕಪ್ಪುಗೊರಳಾನೆ ಬಾರೊ ಕಂ | ದರ್ಪಹರನೆ ಬಾರೊ | ಅಪಾರಮಹಿಮಾ ಅಗಣಿತಶೌರ್ಯನೆ ಬಾರೊ | ಸರ್ಪಭೂಷಣನೆ ಬಾರೊ || ೨ || ಕಂದನಾ ತಲೆಕೆಡಹಿದವನೆ ಬಾರೊ | ಇಂದ್ರ ಅಜಗೊಲಿವವನೆ ಬಾರೊ | ಅಂಧಕಾಂತಕ ಇಂದ್ರವಂದಿತ | ನಂದಿವಾಹನನೆ ಬಾರೊ || ೩ || ಅಂಬರಪುರಹರನೆ ಬಾರೊ ತ್ರಿ | ಯಂಬಕ ಮಹದೇವನೆ ಬಾರೊ | ಅಂಬಿಕವಲ್ಲಭ | ಸಿಂಧುರಮುಖ ಪಿತ ಶಂಭುಮೂರುತಿಯೆ ಬಾರೊ || ೪ || ಸುರನದಿಯಪೊತ್ತವನೆ ಬಾರೊ | ವರ ಪಂಪಾಪುರನಿಲಯನೆ ಬಾರೊ | ಶಿರಿಮೋಹನ್ನ ವಿಠಲನ್ನ | ಪರಮದಾಸಾನೆ ಬಾರೊ || ೫ || ಶ್ರೀಶ ||

## ೧೦. ರಾಗ ಶಂಕರಾಭರಣ, ತ್ರಿಪುಟತಾಳ.

ನಿನ್ನ ತೊಂಡಾನಂತೆ ತಿಳಿದೆನ್ನಾಳೂಳಿಗಪೇಳೋ | ಯೆನ್ನಾಳುವನೆ ಯಿನ್ನೊಂದ ನಾನೊಲ್ಲೆನೋ || ಪಲ್ಲ || ಬಾಲ್ಯವೊದಲು ಪರರನುಸರಣೆಯಮಾಡಿ | ಹೊಲ್ಲನಾದೆನು ದೇವಾ ಹಂಬಲಿಸೀ | ಕಲ್ಲು ಆವಿನಪಾಲುಕರುಬಯಸಿದಂದದೀ | ಇಲ್ಲದಂತಾಯಿತೋ ಎಲ್ಲೆಲ್ಲಿ ಪೋವರು || ೧ || ಮುಂಜಾನೆಯೆದ್ದು ಮಂದಿರವ ಗುಡಿಸುವೆನೊ | ಅಂಜಿಪಾವುಗೆ ಪಾದಕೊಪ್ಪಿಸುವೇ || ಕಂಜಾಕ್ಷ ನಿನ್ನ ಕಾಳಂಜಿಯ ಪಿಡಿವೆನೋ | ಸಂಜೆಗೆಪಂಜ ನಾ ಹಿಡಿದು ಸೇವಿಸುವೆನೋ || ೨ || ಕಡೆಬಾಗಿಲಾಕಾಯ್ದು ಒಡೆಯಾನೀ ಕಳುಹಿದ | ಉಡುಗೋರೆ ಒಯ್ದು ನಿನ್ನವರಿಗೀವೇ || ಕೊಡೆಯುಪಿಡಿವೆ ಶ್ರೀನಿವಾಸ ಭೂವರ ಶ್ರೀ | ಪಿಡಿದೆನ್ನ ಸಲಹೊ ರಘುಪತಿವಿಠ್ಠಲ || ೩ || ಶ್ರೀಶ ||

॥ ಶ್ರೀಮಧ್ವೇಶಾರ್ಪಣಮಸ್ತು ॥

### ೧೧. ರಾಗ ಯಮುನಾ, ಏಕತಾಳ.

ಮನಾ ಮರೆಯುದನುದಿನಾ ಶ್ರೀನಾಥನ ನೆನಾದು ಸೈಸೈ, ಅನ್ನೀಸೆನ್ನಾ || ಪಲ್ಲ || ಸತೀಸುತರಲಿ ಅತೀತವಾಗದೆ | ಕಥಾಸುಪಥ ಸದ್ಗತಿಮೂಲ ಹರಿ || ೧ || ಸೇವಿಸಿ ಸತ್ಪಾತ್ರರ ಪಾದಾಂಬುಜ | ಜೀವಿಸಿ ಕಳೆ ಸಂಸ್ಕೃತಿ ಜಾಲ || ೨ || ಶ್ರೀಶವಿಠ್ಠಲನ ದಾಸನೆನುತ ಯಮ | ಪಾಶವ ಪರಿಹರಿಸಿಕೊ ಯೆಲಾ || ಯಮ || ಪಾಶವ || ೩ || ಶ್ರೀ ||

### ೧೨. ರಾಗ ನವರೋಜು, ಆದಿತಾಳ.

ರಂಗಯ್ಯ ರಂಗ ಬಾರೋ | ಬರುತೀಯ | ನಮ್ಮ ನಿಗೆ ಬಾರೋ || ಪಲ್ಲ || ಬಂದರೆ ಬುಗುರೀಚಂಡುಗಳನೆ ಕೊಟ್ಟು | ಬಗೆಬಗೆ ಆಟವ ಕಲಿಸಿ ವಲಿಸುವೇ || ೧ || ಬಂದರೆ ರಸರಸಾಯನಗಳುಣಿಸೀ | ಮುಸುಕಿನೊಳಗೆ ಬಚ್ಚಿಟ್ಟುಕೊಂಬೆನು ಬಾರೊ || ೨ || ಬಂದರೆ ಶ್ರೀದವಿಠ್ಠಲ ನಿನಗೇ | ಸುಂದರ ಸವಿಮಾತಾ ಹೇಳುವೆನೊಂದೂ || ೩ || ಶ್ರೀ ||

### ೧೩. ರಾಗ ಮೋಹನ, ಅಟತಾಳ.

ಪಾಹಿ ಕೃಷ್ಣ ರಮಾಪತೆ || ಪಲ್ಲ || ಪಾಹಿ ಕೃಷ್ಣ ನೀನಮ್ಮನ್ನೀವೂರೊಳು ಬಿಟ್ಟು | ನೀ ಪೋಗದಿರುಕಂಡ್ಯ ಮಧುರೆಗೆ || ಅನುಪಲ್ಲ || ಬಾಲಕತನದಿಂದ ನಿನ್ನ ನಂಬಿದ್ದೆವು | ಕೀಳುನುಡಿಗಳೊಂದಾಡಿದ್ದೆವೇ || ೧ || ತಾಳಲಾರೆವೊ ಕಾಮನಟ್ಟುಳಿ ನೀ ಪೋದ | ಮೇಲೆ ದಯುವಮಾಡಿ ನಿಲ್ಲದೋ || ೨ || ಯೇನು ಕಾರಣ ಉಂಟು ಪೋಗಲಿಕಲ್ಲಿಗೆ | ಶ್ರೀನಿವಾಸನೆ ಪೇಳು ಮಾಜದೇ || ೩ || ದಾನವಾಂತಕ ನಿಮ್ಮ ತಂದೆತಾಯಿಣ್ಣಾರು | ಹೀನಮಾತುಗಳನಾಡಿದರೇನೋ || ೪ || ಆಕಳಕಾಯ್ವುದು ಬ್ಯಾಸರವಾಯಿತೆ | ಸಾಕಲರಿಯ ನಮ್ಮನ್ನೆಲ್ಲರಾ || ೫ || ಗೋಕುಲದೊಳು ಪರ ರಾಯರಂಜಿಕೆಯಿಲ್ಲ | ಯಾಕೆ ಇಲ್ಲಿಂದ ನೀತೆರಳುವೀ || ೬ || ಜಾರತನವ ಮಾಡುತಿಹನು ಕೇಶವನೆಂದು | ದೂರುವರಾರು ಈ ಪುರದೊಳೂ || ೭ || ತೋರೂ ಅವರ ಈಕ್ಷಣಕೆ ಪೋಗಿ ಗಂಟ | ಲ್ಹಾರಿ

ಕಲಹವಮಾಡಿಬಂದೆವ್ರೋ ॥ ೮ ॥ ನಮ್ಮನೆಯಲಿ ಪಾಲುಬೆಣ್ಣೆಯ ಕದಿಯಲು । ನಿಮ್ಮಮ್ಮನಲ್ಲಿ ದೂರಿದೆವೇನೋ ॥ ೯ ॥ ಸುಮ್ಮನೊಂದಿವಸ ಅಂದಿದ್ದವೊ ಇಲ್ಲವೂ । ನಮ್ಮಪರಾಧ ಕ್ಷಮಿಸಬೇಕೋ ॥ ೧೦ ॥ ನಿನ್ನ ಸಂಗವಮಾಡಿ ದಿವ್ಯವಸನ ವಸ್ತು । ವನ್ನು ಅಪೇಕ್ಷೆಮಾಡಿದೆವೇನೋ ॥೧೧॥ ಹೆಣ್ಣುಕುಲವು ಪುರುಷರ ಕಾಡುತಿಹರಂತೆ । ಅನಂತ ನಾವು ಅಂಥವರಲ್ಲೋ ॥ ೧೨ ॥ ಜಗದೀಶ ನಿನ್ನಲ್ಲಿ ಮನವಿಟ್ಟು ಮನೆಯೊಳು । ಮಗುಗಳು ಅಳುತಿರೆ ಕರೆಯೆವ್ರೋ ॥ ೧೩ ॥ ವಗತನವನು ಬಿಟ್ಟು ಗಂಡರಿಗಂಜದೆ ನಗಲು ಜನರು ನಾಚದಿದ್ದವ್ರೋ ॥ ೧೪ ॥ ಚಿತ್ತಜನಯ್ಯನ ಸಂಪಾದಿಸಿದಿರೆಂದು । ಅತ್ತೆ ಅತ್ತಿಗೆ ನಮ್ಮ ಬೈವರೋ ॥ ೧೫ ॥ ಹೆತ್ತವರೂರಿಗೆ ಹೇಳೋದು ಸುಳ್ಳಿದು । ಉತ್ತಮತನ ಹೀಗೆ ಕೆಡಿಸೋರೇ ॥ ೧೬ ॥ ಆರಾದರೇನುಮಾಡುವರೂ ಯೆಮಗೆ ಬಲ । ಮಾರಮಣನಿಹಾನೆಯೆಂಬೆವ್ರೋ ॥ ೧೭ ॥ ನೀರಜಾಂಬಕ ಈಗ ನೀಬಿಟ್ಟುಪೋಗಲು । ಮೋರೆ ತೋರುವದ್ಯಾಂಗೆ ಜಗದೊಳೂ ॥ ೧೮ ॥ ಆಳುವ ಪುರುಷರು ಎಮ್ಮವ ಗುಣಕಂಡು । ಕಾಲಿಗೆ ನೀರನು ಕೊಳ್ಳರೋ ॥ ೧೯ ॥ ನೀಲಮೇಘಶ್ಯಾಮನ ಕರುಣವೆ ಸಾಕು । ಕೇಳೆವು ನಿಮ್ಮ ಸಿಟ್ಟೆಂಬೆವ್ರೋ ॥ ೨೦ ॥ ವನದೊಳಗಂದು ನೀ ಕೊಳಲನೂದಲು ಕೇಳಿ । ತನುವ ಮರೆದು ಓಡಿಬಂದೆವೊ ॥ ೨೧ ॥ ವನಿತೆಯರೆಲ್ಲ ಶೀರೆಗಳ ತಲೆಗೆ ಸುತ್ತಿ ಮಣಿಹಾರ ಹರಡಿ ಕಾಲಿಗೆಕಟ್ಟೇ ॥ ೨೨ ॥ ಯೆಣ್ಣೆಯ ಪೂಸಿಕೊಂಡವರು ಉಂಬುವರೆಲ್ಲ । ಉಣ್ಣದೆಂಜಲಗಯ್ಯೊಳಿದ್ದೆವ್ರೋ ॥ ೨೩ ॥ ಸಣ್ಣವರೆಂದು ವಲ್ಲಭರನ್ನೆತ್ತಿದೆವೊ ಪ್ರ । ಸನ್ನವತ್ಸಲ ನಗೆಗೇಡಿದೂ ॥ ೨೪ ॥ ಹಾಸಿಗೆಯಲಿ ಮಲಗಲು ನಿದ್ರೆಬಾರದು । ಶ್ರೀಶ ನಿನ್ನನೆ ನೆನಸುತಿಹೆವ್ರೋ ॥ ೨೫ ॥ ವಾಸುಕಿಶಯನನೆ ಹೋಗಬೇಕಾದರೆ । ದೋಷಉಡಿಯಲಿಕಟ್ಟಿ ನೀ ನಡೀ ॥ ೨೬ ॥ ಬೇಕೆಂದು ಅರಸಿನ ಸ್ನೇಹವೆಮಗೆ ಯೆಂದು । ಕಾಕುಲತೆಯನು ಮಾಡಿದೆವಲ್ಲೋ ॥ ೨೭ ॥ ಶೋಕನಾಶನಯಿಲ್ಲೆ ಇದ್ದರೆ ಈ ಮಾತು । ಯಾಕೆ ನೆನಸಿ ನಾವು ಬಳಲೇವ್ರೋ ॥ ೨೮ ॥ ಎಂದೆಂದಿಗೂ ನಮ್ಮ ಕರವ ಬಿಟ್ಟಗಲಿ ಗೋ । ವಿಂದನೆಂದಿದ್ದೆವೊ ಅನಿರುದ್ಧಾ ॥ ೨೯ ॥

ಸಿಂಧುಬತ್ತಲು ಜಲಜಂತು ಬಳಲುವಂತೆ | ಇಂದಿಗೆಮಗೆ ತೋರುತಿಪ್ಪದೋ || ೩೦ || ಮಂದರೋದ್ಧರ ಬಹುಕಾಲ ನಿನ್ನಯಪಾದ | ಪೊಂದಿಕೊಂಡಹರ ಮರೆಯಬ್ಯಾಡೋ || ೩೧ || ಒಂದು ದಿವಸ ನಕ್ಕು ನುಡಿದ ವರಿಳೆಯೊಳು ಇಂದುಮುಖಿಯರ ಜರೆವದಿಲ್ಲೋ || ೩೨ || ಚಿಂತಿಸಬ್ಯಾಡಿರಿ ಬರುತೇನೆಂತ್ಹೇಳುತಾ | ಇಂತಿದ್ದಬಳಿಕ ನೀ ಬಾಹುವ್ಯಾ || ೩೩ || ಯಂಥ್ಯಂಥ ಶೃಂಗಾರ ಮಾಡಿತೋರಿಸುವಾರೂ | ಅಂಥ ಜಾಣೆಯರಲ್ಲಿದಾರುಂಟೋ || ೩೪ || ಮಧುರಾಪುರಕೆ ಪೋದಬಳಿಕಾಬಾಹುವದೆಂತೊ | ಚದುರೆ ಸ್ತ್ರೀಯರು ಅಲ್ಲಿ ಬಹುಮಂದೀ || ೩೫ || ಮದನಬಾಣದಲಿ ಝುಜ್ಝುರಿತರಾಗುತ ನಿನ್ನ | ಬದಿಯಲ್ಲಿ ಬಂದು ರಮಿಸುವರೋ || ೩೬ || ಪರಿಮಳವಸ್ತ್ರ ಅನೇಕ ವ್ಯೆಭವದಿಂದ | ಪರಮಾತ್ಮ ನಿನ್ನ ರಮಿಸುವಾರೋ || ೩೭ || ಸುರನದೀ ಜನಕ ಆ ಸುಖದಾಸಾಗರದೊಳು | ಪರವೆಗೊಲ್ಲರ ಹೆಂಗಸರದೆಲ್ಲೀ || ೩೮ || ನೊಣವರಿಸಲು ಪಾಪತುಂಬಿಕೊಂಡಗಣಿತಂ | ಗನೆಯರ ಕೊಂದಾರ ವಳಿತೇನೋ || ೩೯ || ದಿನಕರಶತತೇಜ ನಿನ್ನಗಲಿದಮೇಲೆ | ಕ್ಷಣಜೀವಿಸುವದೆಂತು ತಿಳಿದೆಯಾ || ೪೦ || ಬದುಕುವದೆಂತೊ ನೀ ಹೋದಬಳಿಕಲಿಲ್ಲಿ | ಸುದತಿಯರೆಂದು ತಿಳಿಯದೇನೋ || ೪೧ || ಮಧುರಿಪು ಕರುಣಾಸಾಗರನೆಂದು ಜಗದೊಳು | ವದರುತಿಹುದು ವೇದ ಪುಸಿಯೇನೋ || ೪೨ || ಠಕ್ಕುಭಕುತಿ ಮಾಡುತಿದ್ವೆವೆ ನಿನ್ನೊಳು | ಠಕ್ಕಸರಿಪು ಮನ ಸರಿಯೇನೋ || ೪೩ || ಇಕ್ಕೊಳ್ಳೊ ಈ ದೇಹ ನಿನಗೆ ಒಪ್ಪಿಸಿದೆವೊ | ಮುಕ್ಕಳಾಣೆಯೊ ಯರವಿಲ್ಲವೋ || ೪೪ || ಎಲ್ಲಿಂದ ಬಂದನು ಅಕ್ರೂರನೆಂಬುವ | ಫುಲ್ಲನಾಭನೆ ನಿನ್ನ ಕರೆಯಲೂ || || ೪೫ || ಇಲ್ಲಿಂತು ಸ್ತ್ರೀಯರ ಬಿಟ್ಟು ಬಹುವದೆಂತೊ | ಅಲ್ಲಿಗ್ಹೋದವನು ತಿಳಿಯಲಿಲ್ಲೇ || ೪೬ || ಕ್ರೂರಯುಕ್ತನಿಗೆ ಅಕ್ರೂರನೆಂಬುವ ನಾಮ | ಯಾರುಕೊಟ್ಟರೊ ಕಾಣೆ ತಿಳಿಯದೊ || ೪೭ || ನಾರಾಯಣನೆ ಅಪ್ಪಣೆಕೊಡು ಪೋಗಲಿ | ದಾರಿಹಿಡ್ಚದು ತನ್ನ ಊರಿಗೇ || ೪೮ || ಆಲಯದೊಳಗಿರೆ ನೀರಿಗೆಪೋಗಲು | ವಾಲಯಬೆನ್ನ್ಹತ್ತಿಬರುವೆವಲ್ಲೊ || ೪೯ || ಕೂಳುಹುಟ್ಟದೆ ಹೋಗಿ ನಿನ್ನ ಸೇರಿದೆವೆ ಗೋ | ಪಾಲ ಅಂದೆಷ್ಟು ಬೆಳಸಿದೆಲ್ಲೋ || ೫೦ || ನಂಬಿದವರ ಭ್ರಷ್ಟಮಾಡುವುದುಚಿತವೆ | ಅಂಬುಧಿ

ಶಯನ ಅಧೋಕ್ಷಜಾ || ೫೧ || ಕಂಭದಿಂದುದುಭವಿಸಿದ ನರಹರಿ ನಿನ್ನ | ಹಂಬಲಿಲ್ಲದೆ ಹೊತ್ತುಹೋಗದೋ || ೫೨ || ಧರೆಯೊಳಗೆ ಸಣ್ಣ ಧೊರೆ ತನದವರು ದೀ | ನರಪೋಷಣೆಯ ಮಾಡದಿಹರೇನೊ || ೫೩ || ಸುರಾ ರಾಧ್ಯ ಈರೇಳುಭುವನಪಾಳುವದ್ಯಾಕೋ | ಮೊರೆಯಿಡುವರ ಸಲಹ ದಿರೇ || ೫೪ || ವಾಸುದೇವನೆ ಹೀಂಗೆ ಮುಖಭಂಗಮಾಡೋದು | ಏಸು ಜನುಮದ್ದುರಕೆಯಿತ್ತೋ || ೫೫ || ಲೇಸುಮೊದಲಿಗೆ ಸ್ನೇಹವಮಾಡದಿಷ್ಟ ರಾಭಾಸಕಂಜೆವೊ ನಂದನಂದನಾ || ೫೬ || ಮಂದರಧರ ನಿಮ್ಮ ತಂದೆ ತಾಯಣ್ಣರು | ಕುಂದುಮಾತುಗಳನಾಡಿದರೇನೋ || ೫೭ || ಸಂದೇಹ ವಿದ್ದರೆ ಅವರ ಕಾಲಿಗೆಬಿದ್ದು | ವಂದನೆಗಳಮಾಡಿಕೊಂಡೆವೋ || ೫೮ || ದಾಸೇರು ಯೆಮ್ಮನುದಾಸೀನವಮಾಡದೆ | ದೋಷರಹಿತ ಪಯಣನಿಲ್ಲಿ ಸೋ || ೫೯ || ಇನ್ನೊಂದು ಮಾತುಗಳ್ಯಾತಕಾಡುವದೊಪ್ರಾಣೇಶವಿ ಠ್ಠಲ ಕೃಪಾಸಾಗರಾ || ೬೦ || ಶ್ರೀ ||

## ೧೪. ರಾಗ ಮುಖಾರಿ, ಝಂಪೆತಾಳ.

ಅಂಜಿಸುವದ್ಯಾಕಮ್ಮ | ಕಂಜೋದ್ಭವ ನಮ್ಮ | ಅಂಜಿಸಿದರೇ ಲೋಕ ಅಂಜದಿರುವದೇ || ಪಲ್ಲ || ಕುಂಜರಾಗಮನೆ ನಾವಂಜನದೇವಿ | ಸಂಜಾ ತನಾದ ಪ್ರಭಂಜನನೂಗದೆ ಕಂಜನಾಭನಪದಕಂಜಕ್ಕೆ ವಿಮುಖ | ಸಂ ಜೀಲಿಚರಿಸುವಾ | ಪುಂಜಾವು ಕಡಿಮೇ || ೧ || ನಿನ್ನಾಪಾದವನಂಬಿ | ಇನ್ನೀಸಂಸ್ಮೃತಿಯಾ | ಬನ್ನವ ಕಳಕೊಂಡು ಚೆನ್ನಾಗಿ ಜಗದೀ | ಧನ್ಯ ರಾದೆವು ಯೆಂದು ಮನದಿ ಭಜಿಸೇ | ಅನ್ಯರಂತಲೆ ನಮ್ಮನ್ನ ನೋಡು ವರೆ || ೨ || ಶಿರಿನಾರಸಿಂಹನ ವರಭಕ್ತಿಲಿ ನೀನು | ಪರವಶಳಾಗಿಪ್ಪೆ ಪರ ವೇನೆ ನಿನಗೆ | ಪರಮೇಷ್ಠಿ ಮೊದಲಾದಸುರರ ನೀ ಪೊರೆವೇ | ಶಿರಿವಾ ಸುದೇವವಿಠ್ಠಲನ ತೋರಮ್ಮ || ೩ || ಶ್ರೀ ||

## ೧೫. ರಾಗ ನವರೋಜು, ಏಕತಾಳ.

ಕಡಲದಾಟಿದ ಬಲುಧೀರನೇ | ಬಂದು ವಡಲುಪೊಕ್ಕವರಿಗಾಧಾರನೇ || || ಪಲ್ಲ || ಬಿಡದೆ ಭಕ್ತರ ಕಯ್ಯಪಿಡಿದು ರಕ್ಷಿಸುವ ಯೆ | ನ್ನೊಡೆಯ

ಹನುಮರಾಯ | ಅಡವಿಯನಿಲಯ || ಅನುಪಲ್ಲ || ದೃಢದಿಂದ ಲಂಕೆಯ ಪೊಕ್ಕನೇ | ದೇವ | ಮೃಡನಿಂದ ಪೂಜೆಗೆತಕ್ಕನೇ || ಪೊಡವಿಯ ಮಗಳನು ಕಂಡನೇ | ತಿಕ್ಕಿ | ಗಿಡವನು ಫಲಗಳನುಂಡನೇ || ಅಡಿಗಡಿಗೊವಗಿದ ಕಿಡಿಗೇಡಿ ರಕ್ಕಸ | ರ್ಪೊಡದು ಪುರವನೆಲ್ಲ ಕಿಡಿಗಂಜಿಸಿದ ಧೀರ || || ೧ || ತಡಿಯದೆ ಸುದ್ದಿಯ ತಂದನೇ | ಜಗ | ದೊಡೆಯ ರಾಮನ ಮುಂದೆ ನಿಂದನೇ || ಪಿಡಿದೆತ್ತಿ ತರುಗಿರಿ ಪೊತ್ತನೇ | ಕಪಿ | ಗಣಕ್ಕೆ ಒಬ್ಬನೆ ಕರ್ತನೇ || ಜಡಧಿ ವಾರಿಯಕಟ್ಟಿ | ಬಡಿದು ರಾವಣನೆದೆ | ಬಡಗುದ್ದಿ ಕಾಳಗ ಜಡಿದು ಮಾಡಿಸಿದೆ || ೨ || ಸಿಡಿಕಿಲಾಸನವಿತ್ತದಾತಗೇ | ತುಷ್ಟಿ | ಪಡಿಸಿದ ಶ್ರೀರಘುನಾಥಗೇ || ಕಡುವೇಗ ಸಂಜೀವ ಸಲಿಸಿದೇ | ನಂದ | ಪುಡಿವಟ್ಟ ಕಂಟಕನಿಲಿಸಿದೇ || ಬಡವರಾಧಾರಿ ನಿನ್ನಡಿಗೆರಗುವೆ ಲೇಸಾ | ಕೊಡು ಪ್ರಸನ್ವೆಂಕಟವೊಡೆಯನ ನಿಲಯ || ೩ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬. ರಾಗ ಭೈರವಿ, ಮಟ್ಟೆತಾಳ.

ಭಾಪು ಹರಿಮತನೆ | ಭಾಪು ಹರಿಮತಸ್ಥಾಪಿತನೆ | ಮೂರು ರೂಪಿನಲಿ ಬಂದು | ಶಿರಿಪತಿಯ ಮೆಚ್ಚಿಸುವಾ ಪರಾಕ್ರಮಿ | ವ್ಯಾಪಿಸಿದೆ ಭಾರತೀಪತೇ ತೇ ನಮೋ || ಪಲ್ಲ || ಆದಿಯಲಿ ಅಂಜನಾದೇವಿಯ ಮಂಗ | ಳೋದರದಿ ಪುಟ್ಟಿ ಶ್ರೀದ್ಯುಮಣಿಕುಲ | ಮೇದಿನೀಶನ ಪಾದಕೆರಗಿ ಅಂ | ಬೋಧಿದಾಟ್ಯಾಜ್ಞಾದಿ ಆ ದಶಾಸ್ಯನ ಲಂ | ಕಾದಹಿಸಿ ಜಾನಕಿದೇವಿಯ ಸುದ್ದಿ | ಶ್ರೀಧರಗರುಹಿ | ಯೋಧಬಾಧಿತರಾದ ಕಪಿಚೇತ | ನಾದಾಯಕ ತೇ ನಮೋ || ೧ || ತುಂಗಗಿರಿ ಶತಶೃಂಗ ಕೃತಸುವ | ಜ್ರಾಂಗ ಅಗ್ನಿಜಸಂಗ ಮತ್ತ ನೃ | ಪಂಗಳ ಭುಜದಿಂಗೆಲಿದು ಯಜ್ಞ | ಸಂಗರವ ಪೂರಿಸಿ ಸಂಗಡಿಸಿದವ | ಸಂಗರವಪೊಕ್ಕು ಶಿಂಗಗರ್ಜನೆಯಿಂ ಗದೆಯಗೊಂಡು | ಭಂಗಿಸಿದೆಯೊ ಯುಗ್ಮಾಂಗ ಕೃಷ್ಣನೇ | ವಾಂಗತೃಷ್ಣಾತ ತೇ ನಮೋ || ೨ || ತುಚ್ಛರಿಳೆಯೊಳು ಪೆರ್ಚಿ ಬಗೆಬಗೆ | ತುಚ್ಛಿತಾರ್ಥವಿರಚಿತಾತ್ಮಗೆ | ಅಚ್ಯುತೈಕ್ಯವ ಉಚ್ಚರಿಸುತಿರೆ | ಸ್ವಚ್ಛಯತಿರೂಪದೀ ||

ಮಚ್ಛರಿಸುವರ ಕೊಚ್ಚಿ ತಂತ್ರಸಾ | ರಾರ್ಚನೆಯ ಭೇದನಿಶ್ಚೈಸಿ ಶಿರಿ | ಸಚ್ಚಿದಾತ್ಮ ಶ್ರೀವತ್ಸಪ್ರಸನ್ವೇಂಕ | ಟೇಚ್ಛ ಮತ ತೇ ನಮೋ || ೩ ||

೧೭. ರಾಗ ಕರಹರಪ್ರಿಯ, ಆದಿತಾಳ.

ದೂರದಿರೋ ಹರಿಯಾ | ಮುರಾರಿಯ || ಪಲ್ಲ || ದೂರದಿರೋ ಅಘ | ದೂರ ಪರಾತ್ಪರ | ಪಾರಗಾಣದ ಗುಣಸಾಗರ ಶೌರಿಯ || ಅನುಪಲ್ಲ || ಶುದ್ಧಾತ್ಮನು ನಮ್ಮ ಸದನಗಳಿಗೆ ಬಂದು | ಕದ್ದು ಬೆಣ್ಣೆಯನೆಲ್ಲ | ಮೆದ್ದು ಪೋದನೆಂದು || ೧ || ಪಾಲವಾರಿಧಿಯಲಿ | ಓಲಾಡುತಿರುವ | ಬಾಲಕ ನಂತೆ | ಹಾಲುಸವಿದನೆಂದು || ೨ || ದಾಸಜನರ ಮನದಾಶ ಪೂರೈ ಸುವ | ಈಶ ಶ್ರೀನಿವಾಸ ವಿಠ್ಠಲರಾಯನ || ೩ || ಶ್ರೀ ||

೧೮. ರಾಗ ಧನಾಸರಿ, ಅಟತಾಳ.

ತಂಗಿ ನೀ ಕೇಳಿದ್ಯಾ ಅಂಗನಾಮಣೀ | ರಂಗವಲಿದ ಭಾಗವತರ ಮಹಿ ಮೆಗಳ || ಪಲ್ಲ || ಶ್ರವಣಾದಿ ನವವಿಧ | ಸವಿಯ ಭಕುತಿಯಿಂದ | ಪ್ರವೀಣರೆನಿಸಿ ಶ್ರೀಮಾ | ಧವನ ಧ್ಯಾನಿಪಖ್ಯಾತಿ || ೧ || ಅಮಲ ಸತ್ಕ ರ್ಮದಿ | ಶಮದಮಪೂರ್ವಕ | ಅಮಿತಮಹಿಮನಂಘ್ರಿ | ಕಮಲಾರ್ಚ ಪರ ಖ್ಯಾತಿ || ೨ || ಶ್ರೀದವಿಠ್ಠಲನ ಪಾದಭಜಕರಾದ | ಸಾಧುವ ರ್ಯರ ಸುಬೋಧ ಬಣ್ಣಿಪರ್‍ಯಾರೆ || ೩ || ಶ್ರೀ ||

೧೯. ರಾಗ ನಾಯಕಿ, ಅಟತಾಳ.

ನೆರೆನಂಬಿ ಪಡೆಯಿರೋ | ಸ್ಥಿರವಾದ ಕರುಣಾ || ಪಲ್ಲ || ಗುರುರಾಘ ವೇಂದ್ರರಾಯರ ಚಾರುಚರಣವಾ || ಅನುಪಲ್ಲ || ವರಹದಂಷ್ಟ್ರಜಲ ಸುತ್ಸರಿತತೀರದಿ ನಿಂದು | ಶರಣರ ದುರಿತವತರಿದು ಕಾಯ್ವನೆಂದು || ೧ || ಕರವಮುಗಿದು ಬಂದ ಪರಮ ಪಾಮರರಾ || ಪೊರೆವ ಕರುಣಾಕ್ಕಪಾಕರ ಯತಿವರರ || ೨ || ಶ್ರೀಶ ಕೇಶವ ವಿಠಲೇಶನ ದೂತಾ | ರಾಸೆ ಪೂರೈ ಸುವ ಗುಣನಿಧಿ ಸತತ || ೩ || ಶ್ರೀ ||

## ೨೦. ರಾಗ ಮೋಹನ, ಆದಿತಾಳ.

ಎರಡೂ ಕೈಮುಗಿದೂ ಬೇಡುವನ್ಯಾರೆ | ಪೇಳಮ್ಮಯ್ಯ || ಪಲ್ಲ || ಸುರನರರ ಖಳರ ಪರಿಪರಿಕರ್ಮವ | ಹರಿಗೊಪ್ಪಿಸಿದ ಮರುತಕಾಣಮ್ಮ || || ಅನುಪಲ್ಲ || ಕರವ ಬಲಕೆತ್ತಿ ನಿಂತವನ್ಯಾರೇ || ಪೇಳಮ್ಮಯ್ಯ || ಭರದಿಂದ ಚರಣಗಳೂರಿದನ್ಯಾರೇ | ಪೇಳಕ್ಕಯ್ಯ || ದುರುಳಜನರ ಮೆಟ್ಟಿ ಶರಣರಿಗಭಯುವ | ಕರೆದು ಕೊಡುವ ಬಹು ಕರುಣಿ ಕಾಣಮ್ಮ || ೧ || ಬಿಂಕಾದಿ ಮುಖವಾ ತಿರುಹಿವನ್ಯಾರೇ | ಪೇಳಕ್ಕಯ್ಯ || ಟೊಂಕಾದಿ ಯೆಡಗೈಯಿಟ್ಟಿಹನ್ಯಾರೇ | ಪೇಳಕ್ಕಯ್ಯ || ಕಿಂಕರರಡಿ ಬರೆ ಅಂಕದೊಳಿತ್ತುವ | ಡೊಂಕನಾದ ನಿಷ್ಕಳಂಕ ಕಾಣಮ್ಮ || ೨ || ಚಲುವ ಸರ್ವಾಂಗ ಲಕ್ಷಣನ್ಯಾರೇ || ಪೇಳಕ್ಕಯ್ಯ || ಹಲವೂ ಫಲಗಳನೂ ನೀಡುವನ್ಯಾರೇ || ಪೇಳಕ್ಕಯ್ಯ || ಸುಲಭ ಗೋಪತಿವಿಠಲನ ಪ್ರಿಯಕದರುಂಡಲಿಪುರಧೊರೆ ಇವನಮ್ಮ || ೩ || ಶ್ರೀ ||

|| ಶ್ರೀಸುಧ್ವೇಶಾರ್ಪಣಮಸ್ತು ||

## ೨೧. ರಾಗ ಜುಂಜೂಟಿ, ಏಕತಾಳ.

ತಿಳಿಯಾನು ಯೆಂದೆಂದಿಗೆನ್ನಾ | ರಂಗ | ವಲಿವ ದಾಸರ ಜಗನ್ನಾಥ್ಯನಾ || ಪಲ್ಲ || ಹಿರಣ್ಯಕಶಿಪುಜ ಸಹ್ಲಾದ | ನೀವೆ | ಯೆರಡನೆ ಶಲ್ಯನಾದ | ಗುರು ವಾದಿರಾಜರನರ್ಚಿಸಿದಾ | ಪುರಂ | ದರದಾಸರಾಯರಲ್ಲಿ ಉದಿಸಿದ || ೧ || ಐದನೆರೂಪವಿದಂತೇ | ಜನ್ಮ | ಬಾಹೋದು ಏಳು ಮುಂದಂತೇ | ಪೋದಾಭಿವೃದ್ಧಿಗೆ ನೆಲೆಯಂತೆ | ಎಂಬ | ವಾದಿಗಳಿಗೆ ಅಂತೆಗಂತೆ || ೨ || ದಾಸಕೂಟಸ್ಥರಿಗೀಮಾತು | ಸರ್ವ | ದೇಶಗಳಿಗೆ ಅನುಭವವಾಯ್ತು | ಈಸುಕಥಾಲಾಭವಾಯ್ತು | ಶ್ರೀಶ | ಪ್ರಾಣೇಶವಿಠಲನಲ್ಲಿ ಇಹನಾಯ್ತು || ೩ || ಶ್ರೀ ||

## ೨೨. ರಾಗ ಯದುಕುಲಕಾಂಬೋಧಿ, ಆದಿತಾಳ.

ಪಾಂಡುರಂಗ ತ್ವತ್ಪಾದ ಪಾಲಿಸಯ್ಯಾ | ಕರುಣದಿ ಪಿಡಿಕಯ್ಯಾ || ಪಲ್ಲ || ಪುಂಡರೀಕಮುನಿವರದ ನಮಿಪೆ ನಿನಗೇ | ನೀ ತ್ವರಿತದಲ್ಲೆನಗೇ || ಅನುಪಲ್ಲ ||

ವನಜಭವಾದಿ ಸಮಸ್ತ ಸುರವ್ರಾತಾ । ವಂದಿತ ಶ್ರೀನಾಥ । ಪ್ರಣತಾರ್ತಿ
ಹರನೆ ಕಾಮಿತಫಲದಾತಾ । ಮುನಿಗಣಸಂಧ್ಯಾತಾ ॥ ನೆನೆವ ಜನರ
ಮನದೊಳಗಿಹ ವಿಖ್ಯಾತಾ । ಭುವನಾಧಿನಾಥ ॥ ಘನಮಹಿಮ ಒಲಿದು
ಪಾಲಿಸೆನ್ನಮಾತಾ ॥ ದಯಮಾಡಿ ತ್ವರಿತಾ ॥ ೧ ॥ ಸುರುಚಿರಮಹಿ
ಮನೆ ಭಜಕಾಮರಧೇನೂ । ವಸುದೇವರಸೂನು ॥ ಧರಣಿಯೊಳಗೆ
ನಮ್ಮ ಹಿರಿಯರನುದ್ಧಾರಾ । ಮಾಡಿದ ಗಂಭೀರಾ । ಧೊರಿಯೇ ನಿಸ್ತೋ
ರತನ್ಯರ ನಾನರಿಯೇ । ಕೇಳೆಲೊ ನರಹರಿಯೆ ॥ ಕರೆಕರೆ ಭವದೊಳು
ಬಿದ್ದು ಬಾಯಬಿಡುವೇ । ಪೊರೆಯೆಂದು ನುಡಿವೆ ॥ ೨ ॥ ಬಂದ ಜನರ
ಭವಸಾಗರದಪರಿಮಿತೀ ॥ ತೋರಿಸುತಿಹರೀತಿ । ಚೆಂದದಿಂದ ಕರವಿಟ್ಟು
ಕಟಿಗಳಲ್ಲೀ । ಈ ಸುಕ್ಷೇತ್ರದಲೀ । ನಿಂದಿಹ ಭೀಮಾತೀರ ಚಂದ್ರ
ಭಾಗಾ । ದಲ್ಲಿ ಪ್ಯಭೋಗಾ ॥ ತಂದೆ ಶ್ರೀಪತೀವಿಠ್ಠಲ ಸುಖಸಿಂಧೋ ॥
ಅನಾಥಬಂಧೋ ॥ ೩ ॥ ಶ್ರೀಃ ॥

## ೨೩. ರಾಗ ಕಲ್ಯಾಣಿ, ಆದಿತಾಳ.

ಮುಚ್ಚದಿರೆಲವೊ ಮುರಾರಿ । ಕಣ್ಣು ॥ ಪಲ್ಲ ॥ ಮಂಗಳಕರ ಮಕರಂದ
ಸೂಸುತಲಿರೆ । ಕಂಗೊಳಿಸುವರೋ ಕಯ್ಯೂರೀ ಕೃಷ್ಣ ॥ ೧ ॥ ಮುತ್ತಿ
ನಹಾರಾ ಪದಕಮುದ್ರಿಕೆಯೂ । ಬತ್ತುತಲಿವೊ ಬೆರಳೂರೀ ॥ ೨ ॥ ಸುಲ
ಭರರಸಕೇಳು । ಶ್ರೀದವಿಠ್ಠಲನೇ । ಸುಖವು ಕಂಡೆನು ಬಿಡುಶೌರೀ ॥ ೩ ॥

## ೨೪. ರಾಗ ಶ್ರೀರಂಜಿನಿ, ತ್ರಿಪುಟತಾಳ.

ನೋಡೇಗೋಪೀ ರಂಗನಾಟವಾ । ಹುಡುಗಾಟವಾ । ಕಡೆನೋ
ಟವಾ ॥ ಪಲ್ಲ ॥ ಸರಸನಾಡುತಬಂದನೇ । ಅವ । ಸಕ್ಕರೆಚಂದುಟಿ ಸವಿ
ದನೇ । ಸರಸಿಜಾಕ್ಷಿ ಬಾರೆಂದನೇ । ಎನಗೆ ನೀ ಸರಿಯೆಂದನೇ ॥ ೧ ॥
ಚಂಡನಾಡುತ ಬಂದನೇ । ಚಿಕ್ಕ । ರಂಭೆಯರ ತಾ ಕಂಡನೇ ॥ ಗಂ
ಡನು ನಾನೆಂದನೇ । ಕೈಪಿಡಿದು ಮುದ್ದಾಡಿಕೊಂಡನೇ ॥ ೨ ॥ ಬೆಟ್ಟ
ದಿಂದಲಿ ಬಂದಾನೇ । ಆವ । ಘಟ್ಟಣಪುರದಲ್ಲಿ ನಿಂದನೇ ॥ ಮುಟ್ಟಬ್ಯಾ
ಡೆಂದರೆ ಮುಟ್ಟಿದ । ಬೆಟ್ಟದ ಶ್ರೀನಿವಾಸನೆ ॥ ೩ ॥ ಶ್ರೀಃ ॥

## ೨೫. ರಾಗ ತೋಡಿ, ಅಟತಾಳ.

ಬಾಲಲೀಲೆಯು ಸಾಕು | ಬಾರೋ ರಂಗಾ || ಪಲ್ಲ || ಬಾರೋ ರಂಗಾ |
ಕರುಣಾಪಾಂಗಾ || ಅನುಪಲ್ಲ || ಹಾಲುಸಕ್ಕರೆ ನವನೀತವಕೊಡುವೆ ||
ನೀಲಮಾಣಿಕದೊಜ್ರಮುಂಗುರನಿಡುವೇ || ೧ || ಬಿಸಲೊಳಗಾಡುತೀ
ಬಲುವಿಧವೋಡೀ || ಶಶಿಮುಖಿಯರದೃಷ್ಟಿ ತಾಕೀತು ನೋಡಿ || ೨ ||
ಕಟ್ಟೆರಾಯ ನಮ್ಮ ಮಂದಿರವಾಸಾ || ಕೃಷ್ಣಮೂರುತಿ ಮುದ್ದು ಮೋ
ಹನವೇಷಾ || ೩ || ಶ್ರೀಃ ||

|| ಶ್ರೀಮಧ್ವೇಶಾರ್ಪಣಮಸ್ತು ||

## ೨೬. ರಾಗ ಶಹನ, ಅಟತಾಳ.

ಬೇಡಿಕೊಂಬುವೆನಯ್ಯ ಬಾರೋ ಮನೆಗೇ | ಬಾರೋ ಮನೆಗೆ ನಾ
ನೆರಗುವೆ ನಿನಗೇ || ಪಲ್ಲ || ಪುಲ್ಲಶರನಬಾಧೆ ನಾತಾಳಲಾರೇ | ನಲ್ಲನು
ಈಪರಿಯುಲಿ ನುಡಿವಾರೆ || ೧ || ನಾರಿಯುಜಾಲವಿದೇನೆಂದರಿಯೇ | ತೋ
ರಿತು ನಿನ್ನಾಯ ನಡತೆಯು ಸರಿಯೇ || ೨ || ವೇಣುಪುರದ ಕಟ್ಟೆ ಭೀಮ
ಯೆನ್ನೊಡೆಯಾ | ಪ್ರಾಣಕಾಂತ ಶ್ರೀನರಹರಿಪ್ರಿಯಾ || ೩ || ಶ್ರೀಃ ||

## ೨೭. ರಾಗ ಆನಂದಭೈರವಿ, ಅಟತಾಳ.

ರಂಗಯ್ಯ ರಂಗ ಬಾಬಾ ಮನೆಗೇ || ಪಲ್ಲ || ಮುನಿಸುಬ್ಯಾಡವೋ ರಂಗ
ಹಸನಾದಮಾತಾಡೊ | ಶೇಷಶಯನ ರಂಗ ಪುಸಿಯಲ್ಲವೊ ಹರಿ || ೧ ||
ಮಾರಾತಾಪದಿ ನಾನು ಮರುಗಿದೆನನುದಿನ | ಮೊರೆಯುಲಾಲಿಸಿ ಮನ್ನಿ
ಸೂ ಶ್ರೀಹರಿ || ೨ || ನಿನ್ನ ಕಾಣದೆ ಮನನಿಲ್ಲದು ಶ್ರೀಹರಿ | ನೀನೇ
ಗತೀಯೆಂದವರನು ಕಾಯ್ದ್ಯೊ ಬಾ || ೩ || ತನುಮನಧನವನು ನಿನಗೊ
ಪ್ಪಿಸುವೆನೋ | ಅನುಮಾನಬ್ಯಾಡವೊ ಮನಸಿಜಪಿತ ಹರಿ || ೪ || ನಂಬಿ
ದೆನಯ್ಯ ಶ್ರೀರಾಮವಿಠ್ಠಲಕೃಷ್ಣ | ಒಮ್ಮೆ ರತಿಯಗೂಡಿ ಪೋಗೆಲೊ
ಮಧುರಿಗೆ || ೫ || ಶ್ರೀಃ ||

## ೨೮. ರಾಗ ಪೂರ್ವಿಕಲ್ಯಾಣಿ, ಆದಿತಾಳ.

ಗೋಪಿ ನಿನ್ನಾ ಮಗ ಬಲು ಜಾರಚೋರಾ || ಪಲ್ಲ || ಮುದದಿ ಮುಕುಂದಾ | ಸದನಕೆ ಬಂದಾ | ದಧಿಯ ಮಾಸಲಬೆಣ್ಣೆ | ತಿಂದ | ತಿಂದ || ೧ || ಹರೆಯುದ ಪೋರಿ | ಜರದ ಕಂಗೋರಿ | ಭರದಿಂದ ಶಳೆವನು | ಶಿರಿ | ಶೌರಿ || ೨ || ಭಾಳದಿನಾಯಿತು ಹೇಳುವದ್ಯಾಂಗೆ ಗೋ | ಪಾಲನ ಮನಸೊಪ್ಪಿ | ಹಾಗೆ | ಹೀಗೆ || ೩ || ಮಾರಜನಕ ತಾನು ಮನೆಯೊಳು ಪೊಕ್ಕಾ | ಹಿಡಿಯಹೋದರೆ ಕೈಗೆ | ಶಿಕ್ಕ | ನಕ್ಕ || || ೪ || ಶ್ರೀದವಿಠ್ಠಲ್ಲ | ಪೋಷಿಪನೆಲ್ಲ | ಭೂಸುರ ನಾಟ್ಯವೆಲ್ಲ | ಬಲ್ಲ | ಬಲ್ಲ || ೫ || ಗೋಪಿ ||

## ೨೯. ರಾಗ ಶಂಕರಾಭರಣ, ಆದಿತಾಳ.

(ಪುರಂದರದಾಸರ ತಂದೆಯವರಕೃತಿ)

ರಂಗ ಬಂದಿದ್ದಾನೆ | ಸಾರಂಗನಯನೆ || ಪಲ್ಲ || ನಮ್ಮಂಗಾಳದೊಳು ನಿಂತಿದ್ದವ ನೀಲಾಂಗನೀನೆ || ಅನುಪಲ್ಲ || ಸಣ್ಣ ನಾಮವನಿಟ್ಟು | ಕಣ್ಣಿಗೆ ಕಾಡಿಗೆಯನಿಟ್ಟು | ಬಣ್ಣಾದಂಗಿಯತೊಟ್ಟು | ಚಿಣ್ಣಿಕೋಲಳವಟ್ಟು || || ೧ || ಕಡುಕಾಂತಿಮಲಕುಹರಳು | ಮುಡಿದಾಮಲ್ಲಿಗೆಯರಳು | ಬಿಡಿಮುತ್ತಿನೊಂಟಿಕೊಳಲು | ಪಿಡಿದೂ ನುಡಿಸೂವ ಬೆರಳು || ೨ || ಗಣನಾದ ಸಂಪಿಗೇ ವೇಣೂ ವಿನೋದಿಗೇ | ಮಾನಾವನಿತ್ತಬಗೆ | ಏನೂ ಪೇಳಲಿಮಿಗೆ || ೩ || ನಿನ್ನೇ ರಾತ್ರಿಯೊಳ್ ಬಂದು | ಎನ್ನಾ ಬಳಿಯೊಳ್ ನಿಂದು || ಮನ್ನಿಸೀ ಕರೆದಾನು ಬಂದು | ಉನ್ನಂತ ಕಾರ್ಯಕೆಂದು || ೪ || ಕರುಗಾಳ ಗೋವ್‌ಬಳಿಗೆ ಬಿಟ್ಟು | ಮರೆಯಾಲಿದ್ದ ಬೆಣ್ಣೆಯಷ್ಟು | ಸರಿ ಮಾಡಿ ತಿಂದನಷ್ಟು | ನರಸಿಂಹವಿಠ್ಠಲಗುಟ್ಟು || ೫ || ರಂಗ ||

## ೩೦. ರಾಗ ಬೇಹಾಗ್, ಆದಿತಾಳ.

ನೋಡು ನೋಡು ನಾರೀಮಣಿಯ || ಪಲ್ಲ || ನೋಡು ನೋಡು ನಿನ್ನಾ | ಕಣ್ಮನದಣಿಯಾ || ಅನುಪಲ್ಲ || ಮುದ್ದುಸೂಸುವ ಸಲೆ |

ಮುಗುಳ್ನಗೆ ಮೊಗವಾ || ತಿದ್ದಿದ ಕಸ್ತೂರಿತಿಲಕದ ಫಣೆಯಾ || ೧ ||
ಸಾರಾಗಂಭೀರ ಶೃಂಗಾರವಿಹಾರಾ | ಚಾರುಸೌಂದರ್ಯ ವೈಯ್ಯಾರಿ
ಸುಗುಣಿಯಾ || ೨ || ಶ್ರೀದವಿಠ್ಠಲಸಾಕ್ಷಾತ್ತ್ರಿಜಗನ್ಮಯ | ಇಂದ್ರಶರಾ
ಜಗನ್ಮೋಹನಖಣಿಯಾ || ೩ || ಶ್ರೀ ||

|| ಶ್ರೀಮಧ್ವೇಶಾರ್ಪಣಮಸ್ತು ||

## ೩೧. ರಾಗ ಶ್ರೀರಂಜಿನಿ, ಅಟತಾಳ.

ಎಂದಿಗೆಬಹನೇ | ಮಂದಯಾನೇ | ಬಂದರೆ ಬಿಡೆನೇ | ಮಂದಯಾನೇ ||
|| ಅನುಪಲ್ಲ || ಇಂದಿರ ಮಂದಿರ | ಸುಂದರ ಸುಂದರ | ಬಂದರೆ ಬಿಡೆನೇ |
ಮಂದಯಾನೇ || ೧ || ಪೂಗೋಲನಯ್ಯನ | ಜೋಗನೆ ಕರೆತಾ ನಾ |
ಹ್ಯಾಗೆತಾಳಲೀ | ನಾಗವೇಣಿಯೇ || ೨ || ಶುದ್ಧಅಭಿನವ ಜ | ನಾರ್ದ
ನವಿಠ್ಠಲನ | ಪೊದ್ದಿ ಸುಖಿಸುವೇ | ಮುದ್ದುಜಾಣೆ || ೩ || ಶ್ರೀ ||

## ೩೨. ರಾಗ ಬೇಹಾಗ್, ಅಟತಾಳ.

ಇಂದೀವರನಯನೆ ಗೋವಿಂದನ್ಯಾಕೆಬಾರನೇ || ಪಲ್ಲ || ಗೋವಿಂದ
ನ್ಯಾಕೆಬಾರನೇ | ಗೋಪಾಲನ್ಯಾಕೆಬಾರನೆ || ಅನುಪಲ್ಲ || ಜನಕ ಜನನಿ
ಯರ | ಮುನಿಸು ನೋಡಿದೆವೆ | ತನುಮನಧನಗಳ | ತನಗೆ ನೀಡಿ
ದೆವೆ || ೧ || ಪರಮಪುರುಷನೊಳು | ಸರಸವಾಡಿದೆವೆ | ಶಿರಿಪತಿಯೆನ್ನೊಳು
ವಿರಸವಾಡಿದೆವೆ || ೨ || ಸೋಮವದನೆಯರ | ತಾಮರದಿಹನೇ | ಭೀಮೇ
ಶವಿಠ್ಠಲನ ಪಾದನಂಬಿದೆವೇ || ೩ || ಶ್ರೀ ||

## ೩೩. ರಾಗ ಮೋಹನ, ಆದಿತಾಳ.

ವಾದಿರಾಜ ಮುನಿಪಾ | ಹಯಮುಖ ಪಾದಕಮಲ ಮಧುಪಾ || ಪಲ್ಲ ||
ಆದರವನು ತವ ಪಾದಕಮಲದಲಿ | ನೀ ದಯದಲಿ ಕೊಟ್ಟಾದರಿಸೆ
ನ್ನನು || ಅನುಪಲ್ಲ || ಮೂಷಿಕಬಿಲದಿಂದಾ | ಉದರದ ಆಸೆಗೆ ಬರ
ಲೊಂದಾ || ವಾಸುಕಿ ಭಯದಿ ತವಾಸನದಡಿ ಬರೆ | ಕ್ಲೇಶಕಳೆದು

ಸಂಪೋಷಣೆಗೈಸಿದೆ || ೧ || ಮುಂದೆ ಭೂತವರನಾ | ಪ್ರೇರಿಸಿ | ಹಿಂದೆ ಒಬ್ಬ ನರನಾ || ಆ | ನಂದದಿಂದ ಜನವೃಂದ ಮಧ್ಯದೊಳು | ಕುಂಭಕೋಣಪುರ ವೃಂದಣ ನಡಿಸಿದೆ || ೨ || ಕ್ಷಿತಿಯೊಳು ಸತಿ ತನ್ನಾ | ವಲ್ಲಭ | ಮೃತಿಯೈದಿರ ಮುನ್ನಾ || ಅತಿ ಶೋಕದಿ ಬಂದು ನುತಿಸಲು ಪಾದಕೆ | ಪತಿಯನು ಬದುಕಿಸಿ ಹಿತದಿ ರಕ್ಷಿಸಿದೆ || ೩ || ನರಪತಿ ವ್ಯಾಧಿಯಲೀ | ಬಳಲ್ವದ | ತ್ವರಿತದಿ ನೀಕೇಳೀ || ಹರುಷದಿ ಮಜ್ಜನಶರದಿಂದವನು | ದ್ಧರಿಸಿ ಬಂದ ಭಯತೊರಸಿ ಪಾಲಿಸಿದೆ || ೪ || ಶಾಸ್ತ್ರಪ್ರಸಂಗದಲೀ | ನಾರಾಯಣ | ಭೂತರಗೆಲಿದಲ್ಲೀ || ಆತುರದಿಂದಲಿ ಮಾತನಾಡಿ ಶ್ರೀ | ನಾಥನ ಮುಂದಿದ ಪ್ರೀತಿಲಿ ತರಿಸಿದಿ || ೫ || ತುರಗವದನ ಪಾದಾ | ಭುಜದಲಿ | ಧರಿಸಿಕೊಂಡ ಮೋದಾ || ಭರಿತರಾಗಿ ಹಯಗೊರಳಮಡ್ಡಿತವ | ಕರದಿಂದುಣಿಸಿದ ಗುರುವರ ಸುಖಕರ || ೬ || ಭೀಮೇಶವಿಠಲನ್ನಾ | ಪದಯುಗ | ತಾಮರಸಗಳನ್ನಾ || ಪ್ರೇಮದಿ ಭಜಿಸುವ ಧೀಮಂತರಿಗೆ ಸು | ಕಾಮಿತವನು ಕೊಟ್ಟಾ ಮಹಮುನಿಪಗೇ || ೭ || ಶ್ರೀ ||

### ೩೪. ರಾಗ ಕಲ್ಯಾಣಿ, ಆದಿತಾಳ.

ಹರಿ ಮನಮಂದಿರಕೆ ಬಾ | ಮನ್ಮನಮಂದಿರಕೆ ಬಾ || ಪಲ್ಲ || ವಾರಿಜಭವ ಮೊದಲಾದಮರರ ಪರಿ | ವಾರ ಸಹಿತ ಸುಖದೋರುವಂತೆ || ೧ || ನೀ ದಯಮಾಡೆನ್ನಲ್ಲೀ | ಇಭಗೊಲಿದವನೇ | ಮೋದಗೊಳಿಸುವಾ ಪ್ರಹ್ಲಾದವರದ ಬಾ || ೨ || ಶ್ರೀನರಹರಿವಿಠ್ಠಲ ಬೇಡುವೆ ಅನು | ಮಾನ ಬ್ಯಾಡ ತವ ದಾಸನೆನಿಸೋ || ೩ || ಶ್ರೀ ||

### ೩೫. ರಾಗ ಶಂಕರಾಭರಣ, ಅಟತಾಳ.

ಕೇಳಿದ್ಯಾ | ಈ ಕೌತುಕ ಕೇಳಿದ್ಯಾ || ಪಲ್ಲ || ಕೇಳಿದ್ಯಾ ಕೌತುಕವನ್ನೂ | ಈಗ ಪೇಳುವೆ ನಾ ನಿಮಗಿನ್ನೂ || ಆಹಾ || ಹೇಳಾದೆ ಮಧುರಿಗೆ ಜಾಳಕಾರ ಕೃಷ್ಣ | ಕೋಳಿ ಕೂಗದಮುನ್ನ | ನಾಳೆ ಪೋಗುವನಂತೆ || ಅನುಪಲ್ಲ || ಕರೆಯಬಂದಿಹನೊಬ್ಬ ಚೋರಾ | ತನ್ನ | ಕಿರಿಯಯ್ಯನಂತೆ ಅಕ್ರೂರಾ | ಊರ | ಹೊರಹೋಳಿಯಲಿ ಬಿಟ್ಟ ತೇರಾ || ಆಹಾ || ಹಿರಿಯನೆಂದು

ಕಾಲಿಗೆರಗೊ ರಾಮುಕೃಷ್ಣರ | ಭರದಿ ಅಪ್ಪಿಕೊಂಡು ಮರುಳುಮಾಡಿದ ಸುದ್ದಿ || ೧ || ಸೋದರಮಾವನ ಮನೆಯೊಳ್ | ಬೆಳ | ಗಾದ ನಾಕಿನ ದಿನದೊಳ್ | ಕೃಷ್ಣ | ಪೋದರೆ ನೆರದಜನರೊಳ್ || ಆಹಾ || ಕಾದುವ ಮಲ್ಲರ ಮೇಲಾದ ಬಿಲ್ಲುಬ್ಬ | ಸಾಧಿಸಿ ಸಮಯಕ್ಕೆ ಹೋದೆವೆಂಬ ಆರ್ತಿ || ೨ || ಹುಟ್ಟಿದ ಸ್ಥಳವಂತೆ ಮಧುರೀ | ಕಂಸ | ನಟ್ಟುಳಿಗಾಗಿ ತಾ ಬೆದರೀ | ಇ | ಲ್ಲಿ ಟ್ಟುಳಾತನ ತಂಗಿ ಚದುರೀ || ತೋರಿಕೊಟ್ಟರೆ ತನ್ನನು ಬೆದರೀ || ಆಹಾ || ಇಷ್ಟು ಸ್ನೇಹವು ಶ್ರೀದವಿಠ್ಠಲಮಾವನ ಭೆಟ್ಟಿಗಾಗಿ ವಡಂಬಟ್ಟು ಹೋಗುವನಂತೆ || ೩ || ಶ್ರೀ೦೩ ||

|| ಶ್ರೀಮಧ್ವೇಶಾರ್ಪಣಮಸ್ತು ||

## ೩೬. ರಾಗ ಕಮಾಚ್, ತ್ರಿಪುಟತಾಳ. *

ಸ್ವಜನಾಂಬುಜ ಹರಿರಾಜ || ಜಯ || ಪಲ್ಲ || ಸ್ವಜನಾಂಬುಜ ಹರಿರಾಜ ವಾಜಿಮುಖ | ಭಜನೋತ್ಸುಕ ವಾದಿರಾಜ || ಅನುಪಲ್ಲ || ಮೋದತೀರ್ಥವಂಶೋದಧಿ ವಿಧುವರ | ವಾದಿವಿಜಯ ಸುವಿನೋದಾ || ೧ || ಯೋಗಿವರ್ಯ ವಾಗೀಶನಂದನಾ | ಶ್ಲಾಘನೀಯ ಶುಭಯೋಗಾ || ೨ || ತಾಪಸಜನಹೃತ್ತಾಪಹರಣಸಂ | ಗೋಪಿತ ಸುಗುಣಕಲಾಪ || ೩ || ಮರಿತತಿಮಿರ ಭಾಸ್ಕರ ಕರುಣಾಕರ | ಪರಮಹಂಸ ಮಂದಾರಾ || ೪ || ದುಷ್ಟಕಾಮಗಿರಿಶ್ರೇಷ್ಠವಜ್ರನಿಭ | ಶಿಷ್ಟಶರಣ ಸಂತುಷ್ಟಾ || ೫ || ಕುಂದರವದನ ರಾಕೇಂದುವದನ ಸ್ವಾ | ನಂದಿತ ನಿಜಜನವೃಂದಾ || ೬ || ಆಧಿವ್ಯಾಧಿವಿಭೇದಕಭೇದಕ ಸಾಧಕ ಮುನಿಕುಲಬೋಧಾ || ೭ || ನಾರಾಯಣಮುದ್ರಾದಿ ವಿಧಾರಣ | ಕಾರಣ ಭರಣೋದ್ಧಾರಾ || ೮ || ಹೇಯ್ರಸಮಯ ಘನ | ವಾಯುದೇವ ಸಮ | ಗಾಯಕ ಕವಿತತಿಗೇಯಾ || ೯ ||

## ೩೭. ರಾಗ ಮೋಹನ, ಏಕತಾಳ.

ಮೂರೂಜಗವಾ ಕುಣಿಸೂವಂಥ | ಗಾರಡಿಗ ಇವ ದಾರಕ್ಕ | ನಾರಾಯಣಾನಲ್ಲವೇನೇ | ನಾರೀ ಕೇಳೇ ತಂಗೀ || ಪಲ್ಲ || ವಾರೀಯೊಳಗಾ

---

* ಈ ಪದ್ಯದ ಅಂಕಿತ ದೊರೆಯಲಿಲ್ಲ.

ಡುವಾ ವಿಚಾರವಮಾಡೇ ಅಕ್ಕ | ಧೀರ ಬಲುಗಂಭೀರ ಮತ್ಸ್ಯವ | ತಾರಾ ಕಾಣೇ ತಂಗೀ || ೧ || ಹತ್ತುನಾಲ್ಕು ರತ್ನವತೆಗದ ಮತ್ತ ಇವ ದಾರಕ್ಕ || ರತ್ನಕುಚದಾ ಹೇಮಗಿರಿಯನೆತ್ತಿದ ಕೂರ್ಮಾ ತಂಗಿ || ೨ || ಧರಣೀ ಸುರಳೀಸುತ್ತೀ ತಂದಾ | ಅರಸಾ ಇವ ದಾರಕ್ಕಾ | ಅರಿಯದ ಭಕ್ತರ ಮೊರೆ ನೋಡಿದಾ | ವರಹಾಕಾಣೇ ತಂಗೀ || ೩ || ನಂಬೀದರೇ ಕಂಭದಿ ಬಂದಾ ಎಂಬೀ ಇವದಾರಕ್ಕ || ರಂಬೇ ಹೇಮದ ಬೊಂಬೆ ನರಶಿಂಗಾ ಕಾಣೇ ತಂಗೀ || ೪ || ಕವ್ದು ಅಡ್ಡಬಿದ್ದನ ಕಣ್ಣಾ ಯಿರಿದಾ ಇವ ದಾರಕ್ಕಾ || ಮುದ್ದೂಮುಖ ಪ್ರಾಸನ್ನಾನಾಗಿದ್ದ ವಾಮನ ತಂಗೀ || ೫ || ಆ ಮಾತೃದ್ರೋಹಾವಾ ಮಾಡಿದ ಧೀಮಾನಿವ ದಾರಕ್ಕಾ || ಧೀಮಾ ಸಾರ್ವಭೌಮಾ ಪರಶುರಾಮಾ ಕಾಣೇ ತಂಗೀ || ೬ || ಕಾಮಿನೀಯಾ ಪೋಗೀ ತಂದಾ ಭೀಮಾ ಇವದಾರಕ್ಕಾ || ಕಾಮಿತ ವರಗಳಕೊಡುವ | ರಾಮಾ ಕಾಣೆ ತಂಗೀ || ೭ || ಗೊಲ್ಲತಿಯರ ಗಲ್ಲವ ಪಿಡಿದಾ | ನಲ್ಲ ಇವದಾರಕ್ಕಾ || ಗೊಲ್ಲಸತಿಯಾರಿಗೊಲಿದ ಶ್ರೀಕಳ್ಳಕೃಷ್ಣ ತಂಗೀ || ೮ || ತ್ರಿಪುರದೊಳೂ ಚಪಲಾಕ್ಷಿಯರ ವಿಪರೀತಕೂಡಿವನಕ್ಕಾ || ಅಪರೀಮಿತಮಹಿಮ ಶ್ರೀ | ಚಪಲಾ ಬೌದ್ಧಾ ತಂಗೀ || ೯ || ಕುದುರೇನೇರೀ ಎದುರಿಗೆಬರುವ | ಚದುರಾ ಇವ ದಾರಕ್ಕ || ವಿದುರನ ಸಲಹಿದ ಮಧುರಾಪುರದಾ | ಚದುರಾ ಕಲ್ಕೀ ತಂಗೀ || ೧೦ || ಇಂದುವದನಮೂರ್ತಿ ಗೋವಿಂದ ಇವ ದಾರಕ್ಕ || ತುಂಗಾಹೆಳವನಕಟ್ಟಿ ಶ್ರೀರಂಗಾ ಕಾಣೇ ತಂಗೀ || ೧೧ || ಶ್ರೀಃ ||

## ೩೮. ರಾಗ ಚಕ್ರವಾಕ, ಏಕತಾಳ.

ವಿಜಯರಾಜ ಗುರುರಾಜಾಧಿರಾಜ | ಮಹರಾಜ ಶಿರೋರತುನಾ || ಪಲ್ಲ || ತ್ಯಜಿಸಾದೆ ನಿಮ್ಮ ಪಾದಾಂಬುಜ ಬಿಡೆನೆಂಬೋ | ಸುಜನಾರಾ ಪಾಲಿಸಯ್ಯ || ಅನುಪಲ್ಲ || ಜ್ಞಾನಭಕುತಿಕೊಡು ಧ್ಯಾನಶೀಲನಮಾಡು | ಹೀನ ಮನವ ಕೆಡಿಸೋ || ಆನೆಂಬೊ ಹಂಕಾರವನೆ ಬಿಡಿಸೋ ನಿನ್ನವರವನೆನಿಸೋ | ಧೇನಿಸುವಂದದಿ ಹರಿಯಪಾದಾಂಬುಜ | ಮಾನಸದಲಿ

ನಿಲಿಸೋ || ಕಾಣಿಸಿಕೊಡು ನಾನು ಜೀವನು ನಿಜವೆಂಬೊ | ಮಾನಸ ದಲಿ ಬರಿಸೋ || ೧ || ಮೌನವಾಗಿರಲಾರು ದೀನನೆ ಘುಡಿಯಲು | ಪ್ರಾಣಪ್ರೇರಕನಿಂದಲೀ || ಆನೇನಾಡುವದಲ್ಲ ಆನೆನಲಾಪೆನೆ | ಆನೆ ಸ್ವತಂ ತಂತ್ರನೆಲ್ಲೀ || ದೀನಾನಾಗೆರಗಿ ಸಜ್ಜನರ ಪದಾಬ್ಜಕ್ಕೆ | ರೇಣು ನಾನಾ ಗಿರಲೀ || ನೀನೆ ಗತೀಯೆಂದು ನಿನ್ನಾನೆ ಮರೆಹೊಕ್ಕೆ | ಕ್ಷೋಣಿಯೊಳಗೆ ಬಳಲೀ || ೨ || ನಿಮ್ಮ ಕೊಂಡಾಡುವ ಬುಧರು ಕಾಣಲು ಅವ | ರೆಮ್ಮಾ ಪ್ತರೆಂದೆನಲೀ || ನಿಮ್ಮ ಪುಣ್ಯದ ಪುತ್ರ ಗೋಪಾಲದಾಸರು | ನಮ್ಮ ರಕ್ಷ ಕರಾಗಲೀ || ಇಮ್ಮಹಿಯೊಳಗೇಸುಕಾಲವಾದರು ಪುಣ್ಯ | ಸಮ್ಮಂಥ ಕೆಡ ದಿರಲೀ || ಸುಮ್ಮನಸರಿಗೀಶ ರಘುಪತಿವಿಠ್ಠಲ | ಯೆಮ್ಮ ಸ್ವಾಮಿಯಾ ಗಲೀ || ೩ || ಶ್ರೀ೪ ||

## ೩೯. ರಾಗ ಆನಂದಭೈರವಿ, ಆದಿತಾಳ.

ಇದಿರ್ಯಾರೋ ಗುರುವೇ ಸಮರ್ಯಾರೋ | ಶ್ರೀಹಯ | ವದನಪದಪ್ರಿಯ ವಾದಿರಾಜ || ಪಲ್ಲ || ಶಿರಿನಿಲಯನ ಗುಣಗಣಗಳ ಸ್ಮರಿಸುತ | ಗುರುಮಧ್ವ ಮುನಿಪನ ಮಹಿಮೆಯ ಪೊಗಳುತ || ನೆರದಿದ್ದ ಮಾಯ್ಮದಕರಿಗಳ ಶಿರ ವನು | ಭರದಿ ಭೇದಿಪ ಬಲಿವಿಬುಧಕೇಸರಿಯೇ || ೧ || ಹರಿತತ್ವಸಾರ ಸಜ್ಜನರಿಗೆ ತಿಳಿಯದೆ | ಪರಿಪರಿ ಕುಸುಮಯತಮ ಕವಿಯಲು ನೀ || ಸರಸ ಭಾರತ ಮೊದಲಾದ ಗ್ರಂಥಗಳನು | ವಿರಚಿಸಿ ತಮ ಹರಿಸಿದ ದಿನಕರನೇ || ೨ || ಸ್ವಾದಿಯಪುರದಲಿರುವ ಹಯವದನನ | ಮೋದದಿ ಭಜಿಸುತ ಈಧರೆಯೊಳು ಪೂರ್ಣ || ಬೋಧತೀರ್ಥರ ಪಾದಸೇವಕರಿಗೆ | ಆದರವಾಳ್ಪ ಯತಿಕುಲಶಿರೋಮಣಿ || ೩ || ಮುದ್ದು ಲಕ್ಷ್ಮೀಶಾವೆಂಕಟ ವಿಠಲನ | ಹೊದ್ದಿದ್ದ ಭಕ್ತರ ಸಂತಾಪ ಕಳೆಯುತ || ಮಧ್ವಮುನಿಯ ಮತದುಗ್ಧವಾರಿಧಿಯೊಳು | ಉದ್ಭವಿಸಿದ ಪೂರ್ಣಶುದ್ಧಚಂದ್ರಮನೇ || ೪ ||

## ೪೦. ರಾಗ ಕಮಾಚ್, ಛಾಪುತಾಳ.

ದಯಮಾಡಾಬಾರದೇ | ನೀ | ದಯಮಾಡಾಬಾರದೇ || ಪಲ್ಲ || ಭಯ ನಿವಾರಣಾ | ಭಕ್ತವತ್ಸಲಾ || ಅನುಪಲ್ಲ || ಪರಧನ ಪರಸತಿಯರ ಬಯು

ಸುವ ಮನ | ಮುರಿದು ನಿನ್ನ ಪಾದಸ್ಮರಣೆ ಯೆನಗೆ || ೧ || ಸ್ವಾದಾನ್ನ ವದೊಳು ಸುಖಿಸುವ ಮನಸಿನ | ಹಾದಿ ಬಿಡಿಸಿ ತವ ಪಾದಸ್ಮರಣೆಯ || || ೨ || ಕಮಲೇಶವಿಠಲನ ಮಮತೆಪಾತ್ರ ಸದಾ | ಕಮನೀಯರೊಳು ಸುಮತಿಯೆನಗೆ || ೩ || ಶ್ರೀಃ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೧. ರಾಗ ಕಮಾಚ್, ಆದಿತಾಳ.

ಭಜನೆಯಾ ಮಾಡಬಾರದೇ || ಪಲ್ಲ || ಕಾಂತೆಯರಿಗೆ ಬಲು ಭ್ರಾಂತ ನಾಗದೆ | ನಿ | ರಂತರ ಮನದಲಿ ಕಂತುಪಿತನ || ೧ || ಘೋರತರದ ಸಂಸಾರದುಃಖ | ನಿ | ಸ್ಸಾರವೆನುತ ಶ್ರೀಭೂರಮಣನ || ೨ || ಕ್ಲೇಶ ರಹಿತ ಭೀಮೇಶವಿಠಲ | ಸ | ರ್ವೇಶನೆಂಬ ಉಲ್ಲಾಸ ಬಿಡದೆ ನೀ || ೩ ||

## ೪೨. ರಾಗ ಶಂಕರಾಭರಣ, ಅಟತಾಳ.

ಆರೇನಂದರಯ್ಯ | ರಂಗಯ್ಯ || ಪಲ್ಲ || ಆರೇನಂದರು | ಯದುಕುಲಾ ಗ್ರಣಿ ನಿನ್ನ | ಕಾರುಣ್ಯಲೀಲೆಯ ತಾಳಲಾರದೆ ನಿನ || ಅನುಪಲ್ಲ || ಅಂಬೆಗಾಲಿಕ್ಕುವ ಅಂಬುಜಾಕ್ಷ ನಿನ್ನ | ಬಿಂಬಾಧರ ಮುಖ ಚುಂಬಿಸಿ ಬಂದವರ್ಯಾ || ೧ || ಸರಸಿಜ ಸನ್ನಿಭ ಕಿರಿನಗೆಮುಖದಿಂದ | ಸುರಿವೊ ಜೊಲ್ಲಿನ ಬಾಯ್ತೆರೆಯುತ ಬಂದವ || ೨ || ಕಂಗಳೊಳಗೆ ಜಲಂಗಳು ತುಂಬಿವೆ | ಅಂಗಳದೊಳಗಿದ್ದ ರಂಗನಾಯಕ ನಿನ || ೩ || ಮೂರ್ಜಗ ನಿನ ಕಿರಿಬೊಜ್ಜೆನೊಳಗಲುತ | ಹೆಜ್ಜೆನಿಕ್ಕಲು ಕಾಲ್ಗೆಜ್ಜೆಗೆ ಬೆದರುವ || || ೪ || ಬಿಟ್ಟು ಹಿಡಿದು ಪುಟ್ಟಪುಟ್ಟ ಪಾದದಿಂದ | ದಟ್ಯಾಡಿ ಕಮಲೇಶ ವಿಠ್ಠಲರಾಯಗೆ || ೫ || ಶ್ರೀಃ ||

## ೪೩. ರಾಗ ಜಂಜೂಟಿ, ಅಟತಾಳ.

ವಂದಿಪೆ ವರಗುಣಸಾಂದ್ರರಾ | ನಾನು | ವಂದಿಪೆ ವರಗುಣಸಾಂದ್ರರಾ || || ಪಲ್ಲ || ವಂದಿಪೆ ವರಗುಣಸಾಂದ್ರ ಶಿಖಾಮಣಿ | ಸುಂದರ ಗುರು ಸತ್ಯ

ಬೋಧರಾ || ಅನುಪಲ್ಲ || ಜಪತಪ ವ್ಯಾಖ್ಯಾನಪರಿಮಿತ ಜ್ಞಾನ ತಪೋನಿಧಿ ಗುರು ಸತ್ಯಬೋಧರಾ || ೧ || ಅದ್ವೈತಶಾಸ್ತ್ರವ ಸದ್ದಡಗಿಸಿದಂಥ | ಮಧ್ವರಾಯರ ಮುಖ್ಯ ಶಿಷ್ಯರಾ || ೨ || ಕಾಮಿತಫಲವೀವ ಸ್ವಾಮಿ ಶ್ರೀರಘುಪತಿಯ | ಪ್ರೇಮದಿ ಭಜಿಸುವ ಗುರುಗಳ || ೩ ||

## ೪೪. ರಾಗ ಪೂರ್ವಿ, ಆದಿತಾಳ.

ನಿಜ ಕೈರವ ದ್ವಿಜರಾಜ ಜಯ || ಪಲ್ಲ || ನಿಜ ಕೈರವ ದ್ವಿಜರಾಜ ನೈಜಸುಖ | ವ್ರಜದಾಯಕ ವಾದಿರಾಜಾ || ಅನುಪಲ್ಲ || ಯಾತ್ರಾಚರಣ ಕ್ಷೇತ್ರ ತೀರ್ಥಪದ | ಸ್ತೋತ್ರರಚನವಿಚಿತ್ರಾ || ೧ || ಶ್ರೀಕರ ಭಾರತ ಟೀಕಾಕಾರಕ | ಲೋಕಮಹಿತ ಸುಶ್ಲೋಕಾ || ೨ || ರುಗ್ಮಿಣೀಶವಿಜಯೋರು ರತ್ನಮಯ | ಸ್ರಗ್ಭೂಷಾಪ್ರತಿವಾಗ್ಮೀ || ೩ || ಭಕ್ತ್ಯಾದಿದ ಸದ್ವ್ಯಕ್ತಿಮಲ್ಲಿಕಾ | ವ್ಯಕ್ತಿಕಾರಣ ಸುಶಕ್ತಾ || ೪ || ತಾನಾಕಾನ ಸುಶಾನ ನಿರಂಜನ | ಸಾನುರಾಗ ಹರಿಧ್ಯಾನಾ || ೫ || ಕಂಟಕಹರ ವೈಕುಂಠವರ್ಣನೋ | ತ್ಕಂಠಿತ ವರಮಯ ಕಂಠಾ || ೬ || ಚಂಡವಾಯಿ ಮುಖ | ಷಂಡೋದ್ಭವಮನೆ ಗುಂಡಕ್ರಿಯ ಕೋದಂಡಾ || ೭ || ಕಮಲೇಶೇಷ್ಟವ ಭ್ರಮರಗೀತಪದ | ಸಮುದಾಯ ಪ್ರಕಟನಕಾಮಾ || ೮ || ಹಯವದನಾಂಕ ಶ್ರಿಯಪದ ಸುಳಾದಿ | ಜಯಕೃತಸದಯೋಪಾಯಾ || ೯ ||

## ೪೫. ರಾಗ ಸುರುಟಿ, ಆದಿತಾಳ.

ಶಾಂತಜನರಿಗೀಶಾ | ರವಿಕುಲ | ಕಾಂತನ ನಿಜದಾಸ || ಪಲ್ಲ || ಭ್ರಾಂತಿ ಬಿಡಿಸಿ ನಿಶ್ಚಿಂತ ಮನದಿ ವೇ | ದಾಂತವೇದ್ಯನಲಿ ಸಂತತ ಕೊಡು ಮನ || || ಅನುಪಲ್ಲ || ಕಡಲ ದಾಟಿ ಬಂದೂ | ವಡೆಯನ | ಮಡದಿಗುಂಗುರ ತಂದೂ || ಸಡಗರದಲ್ಲೀ ತುಡುಗ ದೈತ್ಯನ ಕೊಂದು | ಅಡಿಯಿಡೆ ಲಂಕೆ ಸುಟ್ಟು ಸುಡುಭುಗಿ ಮಾಡಿದ || ೧ || ಏಕಚಕ್ರದಲ್ಲೀ | ಬಕಗೆಂ | ದ್ಹಾಕಿದ ಗ್ರಾಸದಲೀ || ಶಾಖದೆಸಲ ಬಿಡದೇಕತುತ್ತು ಮಾಡಿ | ಭೀಕರ ದೈತ್ಯನವಲೋಕಿಸದ್ಹೊಡದೆಲೊ || ೨ || ವಾಯು ಹನುಮ ಭೀಮಾ |

ಮಧ್ವಾ | ಕಾಯೊ ಪೂರ್ಣಕಾವಾ || ಸಾಯುಬಡಿದಿ ನೀ ಮಾಯಿಗಳೆಲ್ಲರ | ರಾಯ ಶ್ರೀನಿಧಿವಿಠಲಾಯತಿಳಿಯದೆಲೊ || ೩ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೪೬. ರಾಗ ಬೇಹಾಗ್, ಏಕತಾಳ.

ಕಥಾಶ್ರವಣ ಮಾಡೋ || ಹರಿ || ಕಾಲವ | ವೃಥಾ ಕಳೆಯಬ್ಯಾಡೋ || ಹರಿ || ಪಲ್ಲ || ಪೃಥಾತ್ಮಜಗೆ ಸಾರಥೀ ಹೇಳಿದ | ಸ್ಥಿತೀ ತಿಳಿದು ನೋಡೋ || ಅನುಪಲ್ಲ || ಹರಿದಾಸರ ಸತ್ಕರಿಸಿದವರ ಯೆ | ನ್ನವರು ಯೆಂದು ಸೋಡೋ || ೧ || ಹರಿಕಥಾಮೃತವ ಗರೆಯುತ ಚರಿಸುವ | ಹಿರಿಯುವರೊಡನಾಡೋ || ೨ || ಹರಿದಾಸರ ಕಂಡರೆ ಕಾಲ್ಗೆರಗಿ ನೀ | ಹರುಷದಿ ಮಾತಾಡೋ || ೩ || ಹರಿಕಥೆ ಹೇಳಿಸುವರ ಮನೆ ಕೇಳುತವ | ಸರವನು ಬಿಟ್ಟೋಡೋ || ೪ || ಹರಿಕಥೆ ಕೇಳಲು ನೆರದ ಜನರೊಳಗೆ | ಅರಿಯದ್ವಾಂಗೆ ಕೂಡೋ || ೫ || ಹರಿಕಥೆ ಪರಮಾದರದಿ ಕೇಳಿ ಸುಖ | ಸುರಿಸುವರೊಡನಾಡೋ || ೬ || ಹರಿಕಥೆ ಕೇಳುತ ಹರುಷದಿ ಪುಳಕಾಂ | ಕುರಗಳ ನೀಡಾಡೋ || ೭ || ಹರಿಕಥೆ ಕೇಳುತ ಪರವಶದಲಿ ಶ್ರೀ | ಹರಿನಾಮಗಳಾಡೋ || ೮ || ಹರಿಕಥಾಮೃತದ ಸುರತರಂಗಿಣಿಲಿ | ಹರಿಯೊಳಗೋಲ್ಯಾಡೋ || ೯ || ಹರಿಕಥೆ ಕೇಳಿಹಪರದಲಿ ಸುಖಿಸುವ | ವರುಗಳ ವರ ಬೇಡೋ || ೧೦ || ಹರಿಕಥೆಯೊಳು ವೃಥಾ ಹರಟೆಹರಟುವರ | ನೆರೆ ಸೇರಲು ಬ್ಯಾಡೋ || ೧೧ || ಹರಿಕಥೆಯಲಿ ಯಾಮರಿಕೆ ಬಂದರೆ ಯೆ | ಚ್ಚರಿಕೆಲಿ ತಿರುಗಾಡೋ || ೧೨ || ಹರಿಕಥೆ ಕೇಳದೆ ಹೊರಟ್ಹೋಗುವರಿಗೆ | ಬರದೆ ಬಿಡದು ಕೇಡೂ || ೧೩ || ಹರಿಕಥೆ ನಂತರ ಭೂಸುರರಿಗೆ ನೀ | ಶಿರಸಾನಮನ ಮಾಡೋ || ೧೪ || ಹರಿಕಥೆ ಹೇಳಿದವರಿಗೆ ಯಥೋಚಿತ | ತಿರುಗಿಸದಲೆ ನೀಡೋ || ೧೫ || ಕಮಲೇಶವಿಠಲನ ಮಮತೆಪಾತ್ರರ ಪದ | ಕಮಲವ ಕೊಂಡಾಡೋ || ೧೬ || ಶ್ರೀ ||

## ೪೭. ರಾಗ ಕಲ್ಯಾಣಿ, ಆದಿತಾಳ.

ಜನುಮ ಜನುಮದಲ್ಲಿದನೆ ಬೇಡುವೆ || ಪಲ್ಲ || ಶ್ರೀವನರುಹದಳನಯನನ ಸಾಕ್ಷಿಯಲೀ || ಅನುಪಲ್ಲ || ಇನನುದಯದೊಳನು | ದಿನ ತವ ಸೇವಕ | ಜನರೊಳು ಹರಿಕಥೆಯನೆ ಕೇಳುವೆ || ೧ || ಚಿನುಮಯನನಿವೇ | ದನದ ಶೇಷ ಸ | ಜ್ಜನರುಂಡುಳಿದಗಳನು ಸವಿದುಂಬುವೆ || ೨ || ಭೂಸುರವರ ವಸುಧೀಶಾಹ್ವಯ | ಸುಧಾಸಮುದ್ರ ಕಮಲೇಶವಿಠ್ಠಲ || ೩ ||

## ೪೮. ರಾಗ ಕಾಪಿ, ಛಾಪುತಾಳ.

ಕರುಣಾನಿಧಿ ಕಾಣುವನೇನೇ || ಪಲ್ಲ || ಕಾಣುವನೇನೇ ಸಖಿ ವೇಣುಗೋಪಾಲನು | ಜಾಣೆಯರಗಲಿದನೇನೇ || ಅನುಪಲ್ಲ || ಪರಿಪರಿ ಮೋಹಿಸಿ ಕರಗಿಸಿ ಮನೋರಥ | ತ್ವರಿತದಿ ನಡಸಿದನೇನೇ || ೧ || ವರ್ಣಿಸಿ ಬಾಲೇರ ಕಣ್ಣೊರಸುತಾಧರ | ಉಣ್ಣುತಲೋಡಿದನೇನೇ || ೨ || ಧಿಟ್ಟ ಭಾಗ್ಯನಿಧಿ ವಿಠ್ಠಲ ಮಧುರಾ | ಪಟ್ಟಣ ಮುಟ್ಟಿದನೇನೇ || ೩ || ಶ್ರೀಃ ||

## ೪೯. ರಾಗ ಗಮನಕ್ರಿಯು, ಏಕತಾಳ.

ಪೋದ ಹರಿ ದೂರಾ | ಸುದತೇರಗಲಿದ || ಪಲ್ಲ || ಕೇಳುತದೆ ಸಪ್ಪಳು ಝುಣರನುತಾ | ಘಾಳಿ ಹಾರುತಿದೆ ಆವಾದ || ೧ || ಪೋಗುತ ರಥ ಮರೆಯಾಗುತಲಿದೆ | ನಮ್ಮ | ಹ್ಯಾಂಗೆ ಮರೆದನೇ ಆಧೀರಾ || ೨ || ಧಿಟ್ಟ ಭಾಗ್ಯನಿಧಿ ವಿಠ್ಠಲ ತಾನು | ಮುಟ್ಟ ಹೋದನೇನೇ | ಆವೂರಾ || ೩ ||

## ೫೦. ರಾಗ ಪೀಲು, ಅಟತಾಳ.

ಕಾಯೋ ಶ್ರೀಹರೀ || ಪಲ್ಲ || ಕೈಮುಗಿವೇ ಮುರಾರಿ | ಕರುಣದಿ || || ಅನುಪಲ್ಲ || ನೊಂದೆನೊ ಈಭವ | ಬಂಧನದೊಳಗೆ ಶಿಲುಕಿ | ಮುಂದಿದಕೇನು ದಾರಿ || ೧ || ತುಂಬಿದ ಭಕ್ತರು | ಟುಂಬಿ ನಾಚಿಕೆಯ | ಕೊಂಬುವದೇನಿದಕುಸುರೂ || ೨ || ಎಷ್ಟು ನಿನಗೆ ಮೊರೆ | ಯಿಟ್ಟರು ಶ್ರೀದ | ವಿಠ್ಠಲ ಮನಸಿಗೆತಾರೀ || ೩ || ಶ್ರೀಃ ||

|| ಶ್ರೀಮಧ್ವೇಶಾರ್ಪಣಮಸ್ತು ||

### ೫೧. ರಾಗ ಹಿಂದುಸ್ಥಾನಿ ದೇಶಿ, ಏಕತಾಳ.

ಎಲೇ ಮನವೆ ಯದು | ಲಲಾಮನಗಲದೆ | ಭಲಾ ಭಲಾ ಯೆನಿಸನು ಗಾಲ || ಪಲ್ಲ || ತನುಮನ ಧನದಾರಾಪತ್ಯರ ನೀ | ನೆನಸದಿರಭಿಮಾನಕೆ ಮೂಲಾ || ೧ || ಗುರುಹಿರಿಯರ ಸತ್ಕರಿಸಿ ಬ್ಯಾಗ ಪರಿ | ಹರಿಸಿಕೊ ಜನನ ಮರಣ ಜಾಲ || ೨ || ಶ್ರೀದವಿಠ್ಠಲನ ಪಾದಸ್ಮರಣೆಯ | (ದ್ವಂದ್ವವ) ಸಾಧಿಸು ಮುಕ್ತಾಮಣಿ ಮಾಲಾ || ೩ || ಶ್ರೀ ||

### ೫೨. ರಾಗ ಸುರುಟಿ, ಆದಿತಾಳ.

ಸ್ವಜನಾಗ್ರಣಿ ಗುರುರಾಜ || ಜಯ || ಪಲ್ಲ || ಸ್ವಜನಾಗ್ರಣಿ ಗುರುರಾಜ ಪೂಜ್ಯತಮ | ಋಜುಜ್ಞಾನದ ವಾದಿರಾಜಾ || ಅನುಪಲ್ಲ || ಸ್ವಾನುಭಾವ ವಿಜ್ಞಾನಸುಧಾಧುನಿ | ಸ್ನಾನ ಪಾನ ಸುವಿಧಾನಾ || ೧ || ಜ್ಞಾನಾಧಿಕ ಮುದ್ರಾನುಪಾಣಿಯುಗ | ಮಾನನೀಯ ಕೌಪೀನಾ || ೨ || ಭೂಷಾ ಯಿತ ಶುಭಕಾಷಾಯಾಂಬರ | ಶೇಷಶಯನ ಗುಣಘೋಷಾ || ೩ || ಸ್ಫುರದಜನಾದ್ಯಧಿ ಪಾದಾಧಿಷ್ಠಿತ | ಪರಮೋದಯ ಸತ್ಕಾರ || ೪ || ದಂಡಲಸಿತದೋರ್ದಂಡ ಕಮಂಡಲ | ಮಂಡಿತ ಯತಿ ತತಿಶೌಂಡಾ || ೫ || ಗೋಪೀಚಂದನ ಚರ್ಚಿತ ಶೀಲಾ | ಶಾಸತ್ಕುಲನಾಲಾಪಾ || ೬ || ಊರ್ಧ್ವಪುಂಡ್ರ ಮುದ್ರಾಂಕಿತ ನಿಟಿಲೋ | ನ್ಮರ್ದಿತ ಭಕ್ತಾವಿದ್ಯಾ || ೭ || ದ್ವಾದಶನಾಮ ವಿರಚನಾಚಮತ್ಕೃತ | ಬೋಧಕ ಮಾಧವ ಬೋಧಾ || ೮ || ಗಳಶೋಭಿತ ಜಲಜಾಕ್ಷಮಾಲಿಕಾ | ಫಲ ತುಲಸೀಮಣಿಮಾಲಾ || ೯ || ಶಂಸನೀಯ ಹಂಸಾದಿಮಂತ್ರಕೋ | ತ್ತಂಸ ಪ್ರಣವ ಪ್ರಶಂಸಾ || ೧೦ || ಶ್ರೀ ||

### ೫೩. ರಾಗ ಕಲ್ಯಾಣಿ, ಆದಿತಾಳ.

ಹರಿಯ ಸ್ಮರಣೆ ಮಾಡೋ | ನಿರಂತರ || ಪಲ್ಲ || ಪರಗತಿಗಿದು ನಿರ್ಧಾರವೋ || ಅನುಪಲ್ಲ || ಸೂಚಕ ಮಂಗಳ ಸೇಚಕ ಪಾಪವಿ | ಮೋಚಕ ನೆಂದ್ಧುರುಷದೀ ನಿರಂತರ || ೧ || ಸ್ಥಿರಮತಿಯಲಿ ನೀ ಸ್ಮರಿಸಿದರಾಕ್ಷಣ | ದುರಿತ ನಿಶ್ಚಯ ಪರಿಹಾರವೋ || ೨ || ಸಡಗರದಲಿ ಭವಗಡಲ ದಾಂಟಿ

ಸುಖ | ಬಡಬೇಕಾದರೆ ನೀನು | ನಿರಂತರ || ೩ || ಪೋಷಕ ಕಲಿಮಲ ನಾಶಕ ಭವನಿಧಿ | ಶೋಷಕನನು ಮನದಲ್ಲಿ ನಿರಂತರ || ೪ || ಬಂಧಕ ಮೋಚಕ ತಂದೆ ಶ್ರೀಪತಿವಿಠ| ಲೆಂದು ಸುಧೃಢಭಾವದಲಿ ನಿರಂತರ || ೫ ||

## ೫೪. ರಾಗ ಸಾವೇರಿ, ಮಟ್ಟೆತಾಳ.

ರಾಘವೇಂದ್ರಗುರುರಾಯಾ | ಸಲಹಾಬೇಕಯ್ಯ || ಪಲ್ಲ || ನೀಗಿಸು ಭವರೋಗ ನಿತ್ಯ | ಬಾಗಿಸು ಸಜ್ಜನರ ಪಾದಕೆ || ಅನುಪಲ್ಲ || ನೂರು ಸಾವಿರ ಕೋಟಿ ಸಂಖ್ಯೆಗೆ | ಮೀರಿದ ಬಹುವಿಧ ಜನರಿಗೆ | ಹಾರ್ಯೈಸಿ ಬೇಡಿ ಕೊಂಡಂಥಾ | ವರವ ಕೊಟ್ಟು ಅವರ | ಸಾರೆಗರೆದು ಪಾಲಿಸುವಂಥಾ | ಪರಿವಾರ ಜನರಿಗೆ | ಆರುರಸದನ್ನವನೆ ಕೊಡುವಂಥಾ | ಜಗದೊಳಗೆ ಅತಿಶಯ | ವಾರಿಜಾಕ್ಷನೆಂಬಂಥಾ | ಮಹಿಮೆ ನಾ ನೋಡಿ | ಕೀರುತಿಗೆ ಮರುಳಾಗಿ ನಮಿಸಿದೆ | ಗಾರುಮಾಡದೆ ಹತ್ತೆಕರಿಯೊ || ೧ || ರಾಮನೆ ನಿಮ್ಮೊಳಗೆ ನಿಂದು | ಪ್ರೇಮದಿ ಪೂಜೆಯನು ಗೊಂಡು | ಭೂಮಿಯೊಳು ಸಿಮ್ಮನ್ನೆ ಮೆರೆಸುವಾ | ಕಾಮಿತದ ಜನರಿಗೆ | ನೇಮದಿಂದಲಿ ವರವ ತಾ ಕೊಡುವಾ | ಸ್ವರ್ಗಾದಿಯಿಂದಾ | ಕಾಮಧೇನ್ವಾದಿಗಳ ತಾ ತರಿಸುವಾ | ನಾ ಬೇಡಿಕೊಂಬೆನೊ | ಪ್ರೇಮದಿ ಕೊಡು ಯೆನಗೆ ನೀ ವರವಾ | ಧೀ ಮಂತನೇ ದಯವಂತನೇ ಶ್ರೀ | ರಾಮಪದಸರಸಿಜಕೆ ಭೃಂಗಾ || ೨ || ಶ್ರೀಮನೋಹರನಂಘ್ರಿಕಮಲವ | ನೇಮದಿಂದಲಿ ಸ್ತೋತ್ರಮಾಡುವ | ಧೀಮಂತರು ತಾವೇ ಕಾರುಣ್ಯ | ಯೆನಗೊಲಿದು ಮಾಡಲು | ಈಮಹಾ ವರವೀಯಲು ಧನ್ಯಾ | ನಾನೇನ ಬಲ್ಲೆನೊ | ಭೂಮಿಯಾ ಒಳಗಿದ್ದ ಧನ ಧಾನ್ಯಾ | ಅಸ್ಥಿರಾವೆಂಬುವ | ನೇಮ ಬಲ್ಲೆನೊ ಕುಜನರೊಳು ಮಾನ್ಯಾ | ನೀ ಕೊಡಲಿ ಬ್ಯಾಡಾ | ರಾಮಚಂದ್ರವಿಠಲನ ಪದ | ತಾಮರಸ ಹೃದಯದಲಿ ತೋರೋ || ೩ || ಶ್ರೀ || 

## ೫೫. ರಾಗ ಲಾವಣಿ ಪೂರ್ಫಿ, ಆದಿತಾಳ.

ಜಯ ದೇವ || ಪಲ್ಲ || ಜಯ ದೇವದೇವ ಲಕ್ಷ್ಮೀಶ ಭಕ್ತಜನ ಪಾಲಾ | ಪಾಲಾಬ್ಧಿಶಯನ ಪಂಕೇರುಹಾಕ್ಷ ಗೋಪಾಲಾ || ಅನುಪಲ್ಲ || ಶ್ರೀಮ

ದಖಿಲಗುಣಧಾಮ ಸುಕೋಮಲಕಾಯಾ | ಕಾಯಾದವಭಯ ಕಂಜಜ ನಾಭಜನೀಯಾ | ನೀಯಾಗಭೋಕ್ತೃ ಎಂದೆ ಜಪ ಜನಕೆ ಸುಖದಾಯಾ | ದಾಯಾದಿಗಳಿಗಳುಕದವನಿ ಪಾಂಡು ಸಾಹಾಯಾ | ಹಾಯನಗುಡಿ ಭಕ್ತರ ಬಳಲಿಸೊದೆ ತವ ಮಾಯಾ | ಮಾಯಾ ವರ ನಿಜಪದನತಜನ ಸುರತರು ಛಾಯಾ | ಛಾಯಾದಲಿ ಮೃಣ್ಮೆಲಿದು ಜನನಿಗೆ ತೋರಿದ್ಯೊ ಬಾಯಾ | ಬಾಯಾತಕೆ ತಡ ಮನ್ಮನದಿ ಪೊಳೆಯೊ ಕವಿಗೇಯಾ || ೧ || ನಗಧರ ನರಸಖ ನಮೊ ನಮೊ ನಂದಕುಮಾರಾ | ಮಾರಾರಿ ಸುರಪರಿಂ ದೊಂದಿತಾಂಘ್ರಿ ಯದುವೀರಾ | ವೀರಾಧಿವೀರನೃಪರೊರಸಿದ್ಯೊ ಭೃಗು ಜವತಾರಾ | ತಾರಾಪತಿಗನುಜನಿಗಾದೆಲ್ಯೊ ನೀನಾಧಾರಾ | ಧಾರಾಧರ ಸಿಭವಪುವುಳ್ಳನೆ ಮಹಿಮಾಪಾರಾ | ಪಾರಾಶರಮುನಿ ಎಂದೆನಿಸಿದೊ ಸುಗುಣೋದ್ಧಾರಾ | ದಾರಾದರು ಸ್ಮರಿಸಲು ಪೊರೆಯಲು ನೀ ಮುನ್ನೀರಾ || ನೀರಾವುತನೆನಿಸಿ ಕುದುರೆ ಕುಣಿಸಿದೆಲೊ ಶೂರಾ || ೨ || ಶ್ರೀಶ ಕೇಶವವಿಠಲೇಶ ವಿಧೃತವನಮಾಲಾ | ಮಾಲೋಲತಾಂಘ್ರಿ ಮಮ ಧ್ಯೇವ ಗೋಪಿಕಾ ಲೋಲಾ | ಲೋಲಾಕ್ಷಿ ಯಶೋದಾದೇವಿಯ ಮೋಹದ ಬಾಲಾ | ಬಾಲಾನಿಕರದಿ ಹೊಯ್ದಾಡಿದ್ಯೊ ನೀ ಚಿಣಿಕೋಲಾ | ಕೋಲಾಹಲ ಮಾಡಿದಿ ದಧಿ ಕ್ಷೀರವ ಗೋಪಾಲಾ | ಪಾಲಾಸೆಯುಂಟೆ ಪರಿಪೂರ್ಣ ಶುಭಗುಣ ವಿಶಾಲಾ | ಶಾಲಾಪ್ತದಿಂದಧಿಕ ನರಗೆ ತೋರ್ದ್ಯೊ ಘನ ಲೀಲಾ | ನೀ ಲಾಲಿಸೆನ್ನ ನುಡಿ ನಿನ್ನ ದಾಸನ ಕುಚೇಲಾ || ೩ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೫೬. ರಾಗ ನಾಟಿಕುರಂಜಿ, ಆದಿತಾಳ.

ಕುಜನ ಭುಜಗ ದ್ವಿಜರಾಜಾ || ಜಯ || ಪಲ್ಲ || ಕುಜನ ಭುಜಗ ದ್ವಿಜ ರಾಜರಾಜ ಪ್ರಿಯ | ಭಜಕ ವರದ ವಾದಿರಾಜಾ || ಅನುಪಲ್ಲ || ಹರಿತಪ್ತೋಜ್ವಲ ಹರಿಮುದ್ರಾಂಕಿತ | ಧರಣೀಸುರ ಪರಿವಾರಾ || ೧ || ಮಧ್ವಶಾಸ್ತ್ರ ಶುದ್ಧಾಮೃತ ಸೇವನ | ಸಿದ್ಧವರ್ಯಮುನಿ ವೃದ್ಧಾ || ೨ || ಕೇವಲ ಪಾವನ ಭೂವರಹಾರ್ಚಕ | ಭಾವುಕಜನ ಸಂಜೀವ || ೩ || ವಿಶ್ವವಂದ್ಯ

ವ್ಯಾಸಾತ್ಮಕಾಶ್ವಮುಖ | ವಶ್ವದ್ಪಜಕಸವಿಶ್ವಾ || ೪ || ವೃಷ್ಣಿತಿಲಕ ಕೃಷ್ಣೇಷ್ಟಭಜಕ ಮಾಂ | ಪುಷ್ಟಯಾರ್ಚಿತಭಾವತೃಷ್ಣಾ || ೫ || ಅಜ ದ್ವಿಜವಿದಿತನೆ ರಜತಪೀಠಪುರ | ವಿಜಯ ಜಯದ ನಿಜಪೂಜಾ || ೬ || ನಾರಾಯಣನಾಮಕ ಸೇವಕವರ | ನಾರಾಯಣ ಸ್ವಾಧಾರ || ೭ || ಚಕ್ರ ಧಾರೀತ್ರಿವಿಕ್ರಮೋತ್ಸವ | ಪ್ರಕ್ರಿಯಧೃತಧರ ಚಕ್ರಾ || ೮ || ನರಹರಿ ನಗರದ್ಯಾಗತ ದೂತಾ | ದರಿಮೋದಿತಪಾರಿಧೀರಾ || ೯ || ಗಂಗಾಧಿಕ ಶಶಿ ಗಂಗಾಂತಿಕಗತ | ಮಂಗಳಲಸದಖಿಳಾಂಗಾ || ೯ || ವಾಂಛಿತಾರ್ಥ ಹರಿಸಂಚರೂಪಯುತ | ಪಂಚಬೃಂದಾವನಗಾಂಚ || ೧೦ || ಶ್ರೀಃ ||

## ೫೭. ರಾಗ ಸಾವೇರಿ, ಆದಿತಾಳ.

ನಿನ್ನ ನೋಡಿ ಬಲು ಧನ್ಯನಾದೆನೆಲೊ | ಪನ್ನಗಾದ್ರಿನಿಲಯಾ | ಶ್ರೀವೆಂಕಟ || ಪಲ್ಲ || ಬಿನ್ನಪ ಮಾಡುವ | ದಿನ್ನೇನಿಹುದೊ ಪ್ರ | ಸನ್ನನಾಗೆಲವೊ | ಪೊನ್ನೊಡಲೊಡೆಯ || ಅನುಪಲ್ಲ || ಪೊಡವಿಯೊಳಗೆ ಜಡಿದಡಿಯಿಡಬೇಕೆಂದೂ | ನಿಜಭಕತರಿಗೊಲಿದು | ಕಡುದಯದಲಿ ದೃಢಪಡಿಸಿ ನೋಡಲಿ ಬಂದೂ | ಈಮಾಯವೇನು || ಜಗದೊಡೆಯಾ | ನಿನ್ನಡಿಯಾ | ಪಂಗುಡಿಯಾ || ಪಾಡಿಯೆ ನಾಮುವ ನುಡಿಸುತಾ | ನಡಿಸುತಾ | ಸುಖಬಡಿಸುತಾ || ಬಿಡಿಸುತ ಭವಭಯ | ಕಡಿದು | ನೀದಯದೋಳ್ವಿಡಿದು ಸುಜನರ | ಘಡೆ ಸಲಹಿದೆ (ಯಿಂ | ಗಡಲ) ಪಾ | ಲ್ಗಡಲಮುಗಳೊಡೆಯ || ೧ || ಸಿರಿಸರಸಿಜಭವ ಹರ ಸುರಪತಿ ಕಾಮಾ | ದ್ಯರು ಪರಿಪರಿ ಸ್ತುತಿಸುತ | ಪಡೆವರು ನಿನ ಪ್ರೇಮಾ | ಅನಾಥಬಂಧು || ಹೇ ಹರಿಯೇ | ಆಕರಿಯೇ | ನೀನರಿಯೇ | ಮೊರೆಯ ಕೇಳಿ || ತ್ವರಿತದೀ | ಸರಸದೀ | ಮಕರಿಯ | ಸರಿತದೀ | ಚಕ್ರವನೊಗಡಾಗಲೆ | ತರಿದು | ಕರದು | ಪೊರದಾಕ್ಷಣ ಗಜ | ವರನುಳುಹಿದೆಲವೊ | ಪರಮ ಕೃಪಾನಿಧೆ || ೨ || ಮುನಿಗಳ ಮನದಲಿ ಮಿನುಗುವವನು ನೀನೂ | ವೆಂಕಟರಾಮಾರ್ಯರ | ಅನುಜರಿಂದ ಪೂಜೆಯ ಗೊಂಬುವದೇನೂ || ತ್ರೈಲೋಕನಾಥ | ಹೇ ಅನಘಾ | ನಿನ್ನಣುಗಾ | ನೆಂದ್ಯನಗಾ | ಅಭಯುವ ನೀಡೋ |

ಕನಸಿನಲೀ | ಮನಸಿಲೀ | ತವಪದ | ನೆನವಿಲೀ | ಬೇಕೆಂಬಿಚ್ಛೆಯು
ಕೊಡು || ದಣಿದು | ಮಣಿದು | ಕುಣಿದಾಡುವೆನೆಲೊ | ವನಜನಯನ |
ಶ್ರೀಕೇಶವವಿಠಲಾ || ೩ || ಶ್ರೀ ||

## ೫೮. ರಾಗ ಸುರುಟಿ, ಆದಿತಾಳ.

ರಾಯೋ ಕಮಲಾಯಾ | ತಾಕ್ಷನ | ಪ್ರೀಯ ರಾಘವೇಂದ್ರಾ || ಪಲ್ಲ ||
ಹೇಮಕಶಿಪು ಜಾತಾ | ನೆನಿಸೀ | ನೀ ಮೆರೆದೆ ವಿಖ್ಯಾತಾ || ಶ್ರೀ
ಮನೋಹರನ ಪ್ರೇಮದೊಳೊಲಿಸಿ ಮ | ಹಾಮಹಿಮನೆ ಈಪಾಮರನನು
ದಿನ || ೧ || ವ್ಯಾಸಮುನೀರನ್ನಾ | ನೆನಿಸೀ | ದೇಶಾಧಿಪರನ್ನಾ | ಘಾಸಿ
ಗೊಳಿಸದಿನ್ನಾ | ದುರಿತವ | ನಾಶಗೈಸಿ ಮುನ್ನಾ || ನೀ ಸಲಹಿದಿ ನಿನ್ನಾಶ್ರೈ
ಸಿದೆ ಬಹು | ದಾಸರ ಪೊರೆಯುವ ವ್ಯಾಸತತ್ವಜ್ಞರ || ೨ || ಶುಭಗುಣಗಣ
ನಿಲಯಾ | ಜನರಿಗೆ | ಶುಭವ ಕೊಡುವ ಜೀಯಾ || ಅಭಿವಂದಿಪೆನಯ್ಯಾ |
ಯೆನಗೇ | ಅಭಯ ಪಾಲಿಸಯ್ಯಾ || ಅಭಿನವ ಜನಾರ್ದನವಿಠ್ಠಲನ ಪಾ
ದಾಂ | ಬುಜಾಶ್ರಯದ್ಧಂಬಲಲಿರಿಸೆನ್ನ || ೩ || ಶ್ರೀ ||

## ೫೯. ರಾಗ ಶಂಕರಾಭರಣ, ಆದಿತಾಳ.

ಕಂಡಿರೇನೆ ಹರಿಯಾ | ಗುಣ ಭೂ | ಮಂಡಲದೀ ಚರಿಯಾ || ಪಲ್ಲ ||
ಕಂಡಿರೇನೆ ಭೂಮಂಡಲದೀಪರಿ | ಪುಂಡುಗೊಲ್ಲನೆದೆ ಧುಂಡಿಸಿಯಾಯಿತೆ ||
|| ಅನುಪಲ್ಲ || ಒಂದು ಕ್ಷಣವು ತಾನೂ | ಅಗಲದೆ | ಮಂದಿರದಲ್ಲಿ
ಹನೂ || ಕಂದರ ಅಳಿಸುವನೂ | ಕರುಗಳ | ಚಂದದಿ ಬಿಚ್ಚುವನೂ ||
ಇಂದು ನೋಡೆ ಇವ ಬಂದು ಕರೆಯಲೆಂ | ತೆಂದು ರಥದಿ ಆನಂದದೊ
ಳಿಹನ || ೧ || ಉತ್ತುಮ ನಾರಿಯರಾ | ಇಟ್ಟಿಹ | ವಸ್ತ್ರಗಳಪಹಾರಾ ||
ಹತ್ತಿಮರದಿ ದೂರಾ | ಚಾಳಿಸಿ | ಯಿತ್ತವ ತಾ ಚೋರಾ || ಸುತ್ತಲಿವರು
ವರಲುತ್ತಿರೆ ಪಲ್ಲಟ | ಚಿತ್ತವಾಗಿ ತಾನೊತ್ತುವ ರಥವಾ || ೨ || ಕಟ್ಟೆ
ಮಾರ್ಗದಲ್ಲೀ | ಬಾಹುವ | ನಿಷ್ಠೆ ಬಾಲೆರಲ್ಲೀ || ಎಷ್ಟು ದುಡುಕಿನಲ್ಲಿ |
ಕ್ರೀಡಿಸಿ | ಬಿಟ್ಟು ನಮ್ಮನಲ್ಲೀ || ಥಿಟ್ಟ ಭಾಗ್ಯನಿಧಿ ವಿಠ್ಠಲ ತಾ ಮನ |
ಘಟ್ಟಿಮಾಡಿದ ರಥನಟ್ಟಿಸುವೋನದ || ೩ || ಶ್ರೀ ||

## ೬೦. ರಾಗ ಮಧ್ಯಮಾವತಿ, ಮಟ್ಟೆ(ಏಕ) ತಾಳ.

ನೀರೆ ನೋಡುವ ಬಾರೆ | ನದೀ | ತೀರದಲ್ಲಿಹ ಚಾರು ಯತಿಗಳಾ || || ಪಲ್ಲ || ವೃಂದಾವನದೊಳಗಿರುವಾ | ಭೂ | ವೃಂದಾರಕರನು ಪೊರೆವಾ || ವೃಂದಗುಣಗಳಿಂ ಮೆರೆವಾ | ತಾ | ವೃಂದಾರಕತರು ಎನಿಸಿದ ಸುಜನಕೆ || || ೧ || ಮರುತಮತಾಂಬುಧಿಚಂದ್ರಾ | ದಿನ | ಕರ ಅಘತಮಕೆ ರವೀಂದ್ರ || ದುರುಳಮತಾಹಿ ಖಗೇಂದ್ರಾ | ಗುರು | ಕರುಣಾಕರ ರಾಘವೇಂದ್ರನಾ || ೨ || ರವಿ ಶಶಿ ಕುಜ ಬುಧ ಗುರುವೇ | ಕವಿ | ರವಿಜರಾಹುಧ್ವಜ ಬಲವೇ || ಇವರ ದರುಶನಕೆ ಫಲವೇ | ಅಭಿ | ನವಜನಾರ್ದನ ವಿಠಲನ ದಯವೇ || ೩ || ಶ್ರೀ೬೦ ||

|| ಶ್ರೀಮಧ್ವೇಶಾರ್ಪಣಮಸ್ತು ||

## ೬೧. ರಾಗ ಶಹನ, ಝಂಪೆತಾಳ.

ಮಾಮಾಮಾಮ ಭಾಪುರೇ ಭಳಿಭಳಿರೆ ಹನುಮಂತ | ರಾಮಪದ ಪರಿಚರಿಯವಂತ ಹನುಮಂತಾ || ಪಲ್ಲ || ಪುಟ್ಟುತಲೆಪೊನ್ನ ಕಟಸೂತ್ರಕುಂಡಲವೆರಸಿ | ನಿಷ್ಠೆಯಲಿ ರಘುಪತಿಯ ಪದವ ಕಂಡೇ || ಅಟ್ಟಿ ಹರಿದಾಡಿ ಮನಮುಟ್ಟಿ ಮೆಚ್ಚಿಸಿ ಅಜನ | ಪಟ್ಟಕನುವಾದ ಬಲು ಧಿಟ್ಟ ಹನುಮಂತಾ || ೧ || ಅಂಬರಕೆ ಪುಟನೆಗದು ಅಂಬುಧಿಯ ನೆರೆ ದಾಟಿ | ಕುಂಭಿನಿಯ ಮಗಳಿಗುಂಗುರವನಿತ್ತೇ || ಜಂಬಿಡದೆ ಆಲಂಕೆ ಯೆಂಬ ನಗರವ ಸುಟ್ಟ | ಗಂಭೀರ ಧೀರ ಬಲವಂತ ಹನುಮಂತಾ || ೨ || ಉದ್ದುರುಟು ರಾವಣನ ಭುಜಬಲವನೂ ಜರಿದು | ಗುದ್ದಿ ಅವನುರವ ಸಿಡಿಲೆರಗಿದಂತೇ || ಬಿದ್ದು ಹೊಡೆಗೆಡದೊಡಲು ಎದ್ದಡೇ ನೋಡೆ ನಗು | ತಿದ್ದ ವೀರರ ವೀರನಹುದೊ ಹನುಮಂತಾ || ೩ || ಇತ್ತ ಕಪಿಗಳ ಇಂದ್ರಜಿತ್ತು ಬೀಳಿಸಲಿಕೆ | ಪ್ಪತ್ತುಸಾವಿರದ ಯೋಜನ ಬೆಟ್ಟವಾ || ಕಿತ್ತು ತಂದಾಕಪಿಗಳೆತ್ತಿಯಾಪರ್ವತವ | ಅತ್ತ ನೆಲೆಗೊಳಲಿಟ್ಟ ಧಿಟ್ಟ ಹನುಮಂತಾ || ೪ || ಅತಿ ದುರುಳ ರಕ್ಕಸನು ರಥದ ಮೇಲಿರಲು ರಘು | ಪತಿ ಪಾದಚಾರಿಯಾಗಿರಲು ಕಂಡೂ || ಪೃಥುವಿ ಗಗನಕೆ ಬೆಳದು ರಥವಾದೆ ವಡೆಯನಿಗೆ |

ಅತಿ ಭಯಂಕರ ಸತ್ವವಂತ ಹನುಮಂತಾ ‖ ೫ ‖ ವಿಜಯಗೊಲಿದಾ ರಥದ ಧ್ವಜನಾಗಿ ಕುರುಬಲವ । ಅಜಗಿಜಿಯಾಗುರುಳುವಂತಬ್ಬರಿಸುವೇ ‖ ತ್ರಿಜಗ ಜಲಜಾತ ಸಜ್ಜನರ ಕುಮುದೇಂಮುವೇ । ತ್ರಿಜಗ ಪೂಜಿತ ಪುಣ್ಯವಂತ ಹನುಮಂತಾ ‖ ೬ ‖ ಒಡನೊಡೆಯ ಉಣಕರೆಯೆ ಅಡಿಗಡಿಗೆ ಕೈಮುಗಿಮ । ದೃಢಭಕ್ತಿಯಿಂದ ಮೌನದಲಿ ಕುಳಿತೂ ‖ ಎಡೆಯಕೊಂಡೋಡಿ ತಾನುಂಡು ಸುರರಿಗೆ ಯಿತ್ತ । ಕಡುದಯಾವಂತ ಬಲವಂತ ಹನುಮಂತಾ ‖ ೭ ‖ ಪ್ರಥಮದಲಿ ಹನುಮಂತ ದ್ವಿತಿಯದಲಿ ಕಲಿಭೀಮ । ತೃತಿಯದಲಿ ಗುರು ಮಧ್ವಮುನಿಪರೆನಿಸೀ ‖ ದಿತಿಜ ದಲ್ಲಣನಲೀಲಿರಿದಿಟ್ಟ ಸುಜನರಿಗೆ । ಪ್ರತಿಗಾಣೆ ನಿನಗೆ ಎಲೊ ಹಂತ ಹನುಮಂತಾ ‖ ೮ ‖ ಸುರರು ಪೂಮಳೆಗರೆಯೆ ಧರಣಿಜೆಯಳೊಡಗೂಡಿ । ಸ್ಥಿರಪಟ್ಟವನು ವಿಭೀಷಣಗೆ ಕಟ್ಟೀ ‖ ಗುರು ಮಧ್ವಪತಿವಿಠಲ ಶ್ರೀರಾಮಚಂದ್ರಪದ । ಸರಸಿರುಹಭಜಕ ಜಯವಂತ ಹನುಮಂತಾ ‖ ೯ ‖

## ೬೨. ರಾಗ ಯಮುನಾಕಲ್ಯಾಣಿ, ಆದಿತಾಳ.

ವಿಜಯಪ್ರದ ವಾದಿರಾಜಾ ‖ ಜಯ ‖ ಪಲ್ಲ ‖ ವಿಜಯಪ್ರದ ವಾದಿರಾಜಾ । ಋಜುಗಣ । ಸ್ವಜಸ್ರಮುದಿತ ಸಮಾಜ ‖ ಅನುಪಲ್ಲ ‖ ಸಾಧು ಸಮರ್ಥಿತ । ಸೋದಾಧಿಷ್ಠಿತ ಸ್ವ । ಪಾದ ಮಹಿಮಾಗಾಧಾ ‖ ೧ ‖ ವೃಂದಾರಕಸಹ । ವೃಂದಾವನರತ । ವಂದಿತ ಶೃತಿಸನವೃಂದಾ ‖ ೨ ‖ ಕಂಜಜಭವ ಪ್ರಭಂಜನ ಹಠಯುತ । ರಂಜನೀಯ ಪದಪುಂಜಾ ‖ ೩ ‖ ಭ್ರಾಜದೃಜುಗಣರಾಜಮಾನ ಗುಣ । ರಾಜವಿನುತ ಯತಿರಾಜಾ ‖ ೪ ‖ ತಾರಕ ವೃಂದಾವನ ವರಮೃತ್ತಿಕಾ । ಸೇವಕ ಮೌನಸ್ವಭಾವಾ ‖ ೫ ‖ ರಮತುಮನ್ಮನ ತ್ವತ್ಪದಕಮಲಾಂಘ್ರಿ । ಶಮಿತಕಲಿಮಲಸ್ಥೋ ‖ ‖ ೬ ‖ ನಾನ್ಯಂ ಯಾಚೇಹ್ಯನನ್ಯಭಕ್ತಿಂ । ಧನ್ಯತ್ವಯಿಸನ್ಮಾನ್ಯ ‖ ‖ ೭ ‖ ಅಂಬುಜಕರಾವಲಂಬಂದೇಹೀ । ಹ್ಯಂಬುಜಾಕ್ಷ ಪ್ರತಿಬಿಂಬಾ ‖ ‖ ೮ ‖ ಸಾಮಗಪ್ರಿಯ ಶ್ರೀರಾಮವಿಠಲಪದ । ಪ್ರೇಮಾಸ್ಪದ ನಿಸ್ಸೀಮಾ ‖ ೯ ‖ ಶ್ರೀಃ ‖

## ೬೩. ರಾಗ ಧನ್ಯಾಸಿ, ಅಟತಾಳ.

ಗುಬ್ಬಿ ತಾ | ಹೊನ್ನ | ಗುಬ್ಬಿ ತಾ || ಪಲ್ಲ || ಚನ್ನಗೋಪಾಲನ ಚಲುವ ಕೃಷ್ಣನ ಕೈಗೆ || ಅನುಪಲ್ಲ || ಆಗಮವನೆ ತಂದು ಅಜಗಿತ್ತ ಕೈಗೇ | ಸಾಗರವನೆ ತಿಕ್ಕಿ ಸುಧೆಯಿತ್ತ ಕೈಗೇ || ಕೂಗಿ ನಡೆವ ಸ್ಥೂಲ ಕಾಯನ ಕೈಗೇ | ನಾಗಶಯನ ನರಸಿಂಹನ ಕೈಗೇ || ೧ || ಬಲಿಯ ದಾನವ ಬೇಡಿ ಬಂದಂಥ ಕೈಗೇ | ಛಲದಿಂದ ಕ್ಷತ್ರಿಯರ ಕೊಂದಂಥ ಕೈಗೇ || ಕಲಿವಿಭೀಷಣಗಭಯವನಿತ್ತ ಕೈಗೇ | ಬಲುಗಿರಿ ಬೆರಳಲ್ಲಿ ಆತಂಥ ಕೈಗೇ || ೨ || ಪತಿವ್ರತೆಯರ ವ್ರತವಳಿದಂಥ ಕೈಗೇ | ಅತಿವಾದಿ ಸುವರ ಮರ್ದಿಸಿದಂಥಕೈಗೇ || ಸತಿಶಿರೋಮಣಿ ಲಕ್ಷ್ಮೀಕಾಂತನ ಕೈಗೇ | ಚತುರಹೆಳವನ ಕಟ್ಟಿ ರಂಗನ ಕೈಗೇ || ೩ || ಶ್ರೀಃ ||

## ೬೪. ರಾಗ ನವರೋಜು, ಆದಿತಾಳ.

ತಡಮಾಡಬ್ಯಾಡ ಮುರಾರೀ || ಪಲ್ಲ || ನೀ ಕೈಪಿಡಿಯೋ ದೀನೋದ್ಧಾರೀ || ಅನುಪಲ್ಲ || ಕಡೆಹಾಯಲಾರೆ ವಿಚಾರ ಮಾಡದೆ ಕಾಯೋ | ದೋಷವಿದೂರ | ಶ್ರೀಧರ || ೧ || ನೋಡಲಾಗದೆನ್ನ ದುರ್ಗುಣವಾ | ಪೋಷಿಸು ಬ್ಯಾಗಾ | ತೋರಿಸು ಪಾದವಾ | ಮಾಧವಾ || ೨ || ಅನುಮಾನ ವ್ಯಾಕೆ ಗೋಪಾಲಾ | ಭಕ್ತರಧೀನನಲ್ಲೇ | ಕಲಿಕಾಲ | ಶ್ರೀಶವಿಠ್ಠಲ || ೩ ||

## ೬೫. ರಾಗ ಬೇಗಡೆ, ಅಟತಾಳ.

ಕರತಾರೆ | ತಾಳಲಾರೆ || ಪಲ್ಲ || ಪರಿಪರಿಯಾಭರಣಗ | ಳರಳಿದ ಮಲ್ಲಿಗೆ | ಸರಗಳ್ಯಾತಕೆ ನೀ || ೧ || ಗಂಧಪರಿಮಳ ಒಂದು ಬ್ಯಾಡವೆ ಕೇ | ಳಿಂದಿನ ದಿನ ನೀರೇ || ೨ || ಧಿಟ್ಟ ಭಾಗ್ಯನಿಧಿವಿಠ್ಠಲನಲ್ಲಿ ಪೋ | ಗಿಷ್ಟು ಮಾಡೆಲೆ ನೀ || ೩ || ಶ್ರೀಃ ||

|| ಶ್ರೀಮಧ್ವೇಶಾರ್ಪಣಮಸ್ತು ||

## ೬೬. ರಾಗ ಭೈರವಿ, ಮಟ್ಟಿತಾಳ.

ಯೋಗಿಕುಲವರ ಮುಕುಟ ಗುರು ಶ್ರೀ | ರಾಘವೇಂದ್ರನ ಭಜಿಸಿರೋ || ಪಲ್ಲ || ಮೋದತೀರ್ಥಪಯೋಧಿಚಂದಿರ | ಸಾಧುಜನ ಸತ್ಕು

ಮುದಕೇ || ಐದು ಆನನವಾಗಿಹನು ದು | ರ್ವಾದಿ ಗಜಸಮುದಾಯಕೇ || || ೧ || ದೂಷಿಸುವ ಜನರುಗಳ ಗರ್ವ ಅ | ಶೇಷ ಪರಿಹಾರಗೈಸುವಾ || ದಾಸರಭಿಮಾನವನು ಬಿಡದಿಹ | ದೋಷವರ್ಜಿತನೆನಿಸುವಾ || ೨ || ದಿನ ಪನಂದದಿ ಕಾಂತಿ ಬೃಂದಾ | ವನದೊಳಿದ್ದು ಪ್ರಕಾಶವಾ || ಅಣುಗರಿಗೆ ಸಂತೃಪ್ತಿ ಸುಖವನು | ಅನವರತ ಪೂರೈಸುವಾ || ೩ || ವ್ಯಾಪ್ತರಾಗಿಹ ಅಖಿಳರಿಗೆ ಫಲ | ಪ್ರಾಪ್ತಿಗೋಸುಗ ಚರಿಸುವಾ || ಆಪ್ತರಿಲ್ಲವು ಈತನೇ ಯೆನ | ಗಾಪ್ತನನುದಿನವಾಗುವಾ || ೪ || ಕೋಲತನಯೆಯು ತೀರದಲಿ ಹೊ | ನ್ನಾಳಿಯಲಿವಿಹರೀಸುವಾ || ಶೀಲಗೋಪತಿವಿಠಲನಾ ಕೃಪೆ | ಗಾಲಯುನುಯೆಂದೆನಿಸುವಾ || ೫ || ಶ್ರೀಃ ||

೬೭. ರಾಗ ಕೇತಾರಗೌಳ, ಅಟತಾಳ.

ಕೇಳಿರೀತನಗಾಧಚರಿತೆಯ | ಚಲ್ವ | ಜಾಲಿಕಾಪುರದಿದ್ದ ಧೊರೆಯಾ || || ಪಲ್ಲ || ಕಾಳಾಹಿವೇಣಿಯೊಳು ದ್ರುಪದಜೆ | ಶಾಲೆ ಸೆಳೆಯುತ ಖೂಳ ಸಭೆಯೊಳು || ಘಾಳಿಸಿದ ದುರ್ಯೋಧನನ ಕುಲ | ಹಾಳುಮಾಡಿದ ಬಹಳ ಬಗೆಯಲಿ || ಅನುಪಲ್ಲ || ಕಟಕೆಲ್ಲ ಕುರುಕ್ಷೇತ್ರದಲ್ಲೀ | ಬಹಳ | ಧಟಿತವಾಗಿ ನೆರದಿರಲೀ | ಕುಟಿಲ ದುಶ್ಯಾಸೆದ್ದನಲ್ಲೀ | ಭೀಮಾ | ಭ್ರಟಿ ಸುತಲವನ ಕಾಣುತಲೀ || ಕಟಕಟನೆ ಪಲ್ಗಡಿದು ಅಸುರನ | ಪಟಪಟನೆ ಕರುಳನ್ನೆ ಹರಿಯುತ || ಪುಟಪುಟನೆ ಹಾರುತಲಿ ರಣದೊಳು | ಛಟ ಛಟಾ ಛಟಲೆಂದು ಸೀಳಿದ || ೧ || ಗಡಬಡಿಸುತ ಭೀಮನಾಗೇ | ಯೆದ್ದು | ನಡೆದನು ತುಡುಗರ ಬಳಿಗೇ | ತಡಮಾಡದಲೆ ಬಹುಬ್ಯಾಗೇ | ದೊಡ್ಡ | ಗಿಡ ಕಿತ್ತೀಪಿಡಿದಾ ಕಯ್ಯೊಳಗೇ || ಘುಡಿಘುಡಿಸಿ ರೋಷದಲಿ ಅಸುರರ | ಬಡಿಬಡಿದು ಮಕುಟವನೆ ಕಿತ್ತುತ || ಕಡಿಕಡಿದು ರಥಗಳನೆ ತರಿವುತ | ಧಡಧಡಾ ಧಡಲೆಂದು ಕೆಡಹಿದ || ೨ || ಪೂಶರಜನಕ ತಾನೊಲಿದೂ | ಉಪ | ದೇಶ ಕೊಟ್ಟನು ಭೀಮಗೊಂದೂ | ದ್ವೇಷಿ ದುರ್ಯೋಧನನ ಹಿಡಿದೂ | ತೊಡೆ | ನಾಶಾಮಾಡೆಲೊ ಎಂದು ನುಡಿದೂ || ರೋಷ ದಲಿ ಬೊಬ್ಬಿರಿದು ಅವನಾ | ಕಾಶಕೊಗೆಯುತ ಭಾಪುರೇ ಗದೆ | ಬೀಸಿ ಬಡಿಯುತ ಕಡಿದೆ ತೊಡೆಗಳ | ಕೇಶವಾವಿಠಲೇಶನಾಜ್ಞದಿ || ೩ ||

### ೬೮. ರಾಗ ಜಂಜೂಟಿ, ರೂಪಕತಾಳ.

ರಾಘವೇಂದ್ರತೀರ್ಥನೀತ | ರಾಜಿಸುವಾತಾ || ಪಲ್ಲ || ಪಾ | ಪೌಘಗಳೆಲ್ಲ ವನೋಡಿಸಿ ಪುಣ್ಯಗಳೀವಾತಾ || ಅನುಪಲ್ಲ || ಬಣ್ಣಬಣ್ಣದಿಂದ ಬಹಳ ಬೋಧಿಸುವಾತಾ | ಬಹಳ | ಸಣ್ಣದೊಡ್ಡ ಭೀಷ್ಟಗಳೂ ಸಾಧಿಸುವಾತಾ || ಪುಣ್ಯವಂತರಿಂದ ಬಹು ಪೂಜೆಗೊಂಬಾತಾ | ನಮಗೆ | ಕಣ್ಣಹಬ್ಬವಾಗುವಂತೆ ಕಾಣಿಸುವಾತಾ || ೧ || ಕಾಮ ಕ್ರೋಧಾದಿಗಳನೆ ಕಾಲಿಲೊದ್ದಾತಾ | ಈತ | ವ್ಯೋಮಕೇಶನಂತೆ ನಾಲ್ಕುವೇದ ಪ್ರಖ್ಯಾತಾ || ಭೂಮಿಯೋಳ್ ವಾದಿಗಳನೆ ಭೂರಿ ಗೆದ್ದಾತಾ | ಪ್ರೌಢ | ಶ್ರೀಮಧ್ವಯೋಗೀಂದ್ರತೀರ್ಥ ಶಿಷ್ಯನೆಂಬಾತಾ || ೨ || ಸಿದ್ಧವಿದ್ಯಗಳಲಿ ಬಹುಪ್ರಸಿದ್ಧನಾದಾತಾ | ನಮ್ಮ ಮಧ್ವಶಾಸ್ತ್ರಾರ್ಥಗಳನೆ ಮಾಡಿಕೊಟ್ಟಾತಾ || ಮಧ್ವೇಶವಿಠಲನ ಧ್ಯಾನದಲಿದ್ದಾತಾ | ತುಂಗ | ಭದ್ರತೀರದಲ್ಲಿ ತಾನು ವಾಸವಾದಾತಾ || ೩ ||

### ೬೯. ರಾಗ ಭೈರವಿ, ಅಟತಾಳ.

ದಯಮಾಡಾಲೊಲ್ಯಾ | ದಯಾನಿಧೆ || ಪಲ್ಲ || ದಯಮಾಡಲೊಲ್ಯಾ ನಿನ್ನಯ ಸೇವೆ ಪರರ | ನ್ಯಾಯದಿ ಓಲೈಸದಲೆ ನಿ | ರ್ಣಯದಿ ಚರಿಸುವಂತೆ || ಅನುಪಲ್ಲ || ಗೃಹಕರ್ಮ ಭರದೀ | ಮಾಡುತ ಪ್ರೀತಿ | ಅಹರಹರ್ಮನದೀ || ದಹರಾಕಾಶದೊಳಿದ್ದ | ಮಹಮಹಿಮನೆ ನಿನ್ನ | ವಿಹಿತ ಪೂಜಾವಿಧಿ | ಸಹಕಾರವಾಹಂತೆ || ೧ || ಕಾಲೋತ್ಪಾದಕನೇ | ಕಾಲಾಹ್ವಯ | ಕಾಲಪ್ರೇರಕನೇ || ಕಾಲಾನುಕಾಲ ಮಹ | ಕಾಲ ವ್ಯಾಪ್ತದಿ ವಿ | ಶಾಲ ಮೂರುತಿ ಕರು | ಣಾಲವಾಲ ಹರಿ || ೨ || ತಾಪಸ ಪ್ರಿಯಾ | ಶುಭೋದಯ | ನೀಪಿಡಿ ಕಯ್ಯಾ || ಕಾಪಾಡೊ ಯೆನ್ನ ಪ | ರಾಪರತತ್ವ ಸುಧಾಪರ ಮತಿಯಿತ್ತು | ಶ್ರೀಪತಿವಿಠಲಾ || ೩ || ಶ್ರೀ೩ ||

### ೭೦. ರಾಗ ಮಧ್ಯಮಾವತಿ, ಏಕತಾಳ.

ಗುರು ಮಧ್ವರಾಯರಿಗೆ ನಮೋ ನಮೋ | ನಮ್ಮ | ಗುರು ಮಧ್ವಸಂತತಿಗೆ ನಮೋ ನಮೋ || ಪಲ್ಲ || ಶ್ರೀಪಾದರಾಯರಿಗೆ ಗುರು ವ್ಯಾಸ

ರಾಯರಿಗೆ | ಗುರು ವಾದಿರಾಜರಿಗೆ ನಮೋ ನಮೋ || ಗುರು ರಾಘವೇಂ ದ್ರರಾಯರಿಗೆ ವೈಕುಂಠದಾಸರಿಗೆ | ಪುರಂದರದಾಸರಿಗೆ ನಮೋ ನಮೋ || || ೧ || ಗುರು ವಿಜಯದಾಸರಿಗೆ ಭಾಗಣ್ಣದಾಸರಿಗೆ | ರಂಗವಲಿದದಾಸ ರಿಗೆ ನಮೋ ನಮೋ || ಪರಮ ವೈರಾಗ್ಯಶಾಲಿ ತಮ್ಮಣ್ಣದಾಸರಿಗೆ | ಹೊಂಡೆಕಾರದಾಸರಿಗೆ ನಮೋ ನಮೋ || ೨ || ಗುರು ಶ್ರೀಶವಿಠಲನ ಚರಣಾ ಭಕತರಾ | ಚರಣಾರವಿಂದಕೆ ನಮೋ ನಮೋ || ಹರಿ ಗುರು ಚರಣದಿ ನಿರತ ಭಕುತಿಯಿತ್ತು | ಪರಿಪಾಲಿಪ ಗುರುಗಳಿಗೆ ನಮೋ ನಮೋ || ೩ || ಶ್ರೀಃ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೭೧. ರಾಗ ಪೂರ್ವಿ, ಆದಿತಾಳ.

ರಾಜರ ಭಾಗ್ಯವಿದೂ | ನೋಡಿ || ಪಲ್ಲ || ಸೋಜಿಗವೆನಿಸಿ ವಿರಾಜಿ ಸುತಿದಕೋ || ಅನುಪಲ್ಲ || ಬುಧಜನಕೊಪ್ಪುವ ಪದ ಸುಳಾದಿ ಖಳ | ರದೆಗಿಚ್ಚಿನಿಸ್ಸುವ ಚತುರತೆಯೂ || ಸದಮಲ ನಾನಾವಿಧ ಗ್ರಂಥದಿ ಹಯ | ವದನನ ಪೂಜೆಯು ಯಜಿಸುವುದೆಲ್ಲಾ || ೧ || ತಮ್ಮಯ ನೇಮವು ಒಮ್ಮೆಗು ಬಿಡದಂ | ತುಮ್ಮಯುಬಡವಲೆ ಸನ್ಮೊಗದಾ || ಅಮ್ಮಹ ಶಾಸಖಿ ಬೊಮ್ಮಭೂತವನು | ಘಮ್ಮನೆ ನಿರ್ಮಿಸಿ ರಮ್ಮಿಪುದೆಲ್ಲಾ || || ೨ || ಮೇದಿನಿಯೊಳಗೆ ಶುಭೋದಯಕಾರಕ | ಸ್ವಾದಿಸ್ಥಳ ಸರ್ವಾ ಧಿಕವೈ || ಪಾದದ್ವಯದಾಗಾಧಮಹಿಮನೆ ಈ | ಶ್ರೀದವಿಠಲನಾರಾ ಧನೆಯೆಲ್ಲಾ || ೩ || ಶ್ರೀಃ ||

## ೭೨. ರಾಗ ಮೋಹನಕಲ್ಯಾಣಿ, ಆದಿತಾಳ.

ಹರಿಯ ಸ್ಮರಣೆ ಮಾಡೋ | ನಿರಂತರ || ಪಲ್ಲ || ಮೊದಲು ತೋರು ತಿದೆ ಮಧುರ ವಿಷಯಸುಖ | ತುದಿಗೆ ದುಃಖಾ ಅನೇಕಾ || ೧ || ದಾನ ಮಾನ ಬಹು ದಯಾಧರ್ಮತೋ | ಜ್ಞಾನವೆ ಮುಖ್ಯರ ಬೇಕೊ || ೨ || ತಾರಕ ಭವಭಯಹಾರಕ ಕೊನಿಗೇ | ಶ್ರೀದವಿಠ್ಠಲನೆ ಕೇಳೊ || ೩ ||

## ೭೩. ರಾಗ ಆನಂದಭೈರವಿ, ಆದಿತಾಳ. *

ರಾಮಚಂದ್ರಾ ನೀನೇ ಪಾಲಿಸೊ | ಸರೋಜನಾಭ | ಸಾಧುಸಂಗಾ ಶೀಘ್ರ ಕೊಡಿಸೋ || ಪಲ್ಲ || ಎಷ್ಟು ದಿನಾ ಕಷ್ಟಪಡುವಾದೊ | ಈಭವ ದೊಳು | ಈಸಲಾರೆನಯ್ಯ ಹರಿಯೇ || ಇಷ್ಟು ದಿನಾ ಇದ್ದಂತೆಯಿರಲಾರೆ ನೆಂದು ಕರವ | ಮುಟ್ಟಿ ಮುಗಿದು ಬೇಡಿಕೊಂಬೆ | ಮುರಾರಿ ಕೃಷ್ಣ ನೀನೇ ಕಾಯೊ || ೧ || ಹರಿಹರರ ಸಮಾರೆನ್ನದಾ | ಈ ಸಜ್ಜನರಾ | ಸಂಗದಿಂದ ಹೀನಾ ನಾನಾದೇ || ಇನ್ನುಮ್ಯಾಲೆಯಿಲ್ಲವಯ್ಯ ಸೃಷ್ಟಿಗಧಿಕ ಶ್ರೀನಿವಾಸಾ | ಇನ್ನು ನಿನ್ನ ಸ್ಮರಣೆಯಿಂದ | ಇರುವೆನಯ್ಯ ಮುಕುಂದ || || ೨ || ಪೃಥ್ವಿಯಲ್ಲಿ ಪುಟ್ಟೀದಾ ಮೊದಲೂ | ನಿನ್ನಾ ವೃತ್ತಾಂತ | ಒಂದು ದಿನಾ ಮಾಡಲಿಲ್ಲವೋ || ಅಂದು ಯೆನ್ನ ಮ್ಯಾಲೇ ಕ್ರೂರ ದೃಷ್ಟಿ ಯಿಂದಾ ನೋಡಾದೀರು | ವಾಸುದೇವ ವೈಕುಂಠವಾಸ ಲಕ್ಷ್ಮಿಮಾ ರಮಣ || ೩ || ನಿತ್ಯದಲ್ಲಿ ವಿಪ್ರರಾ ವೃಂದಾ | ದೊಳಗೆ ನಾ ಆ | ಸಕ್ತ ನಾಗಿಯಿರುವೇ ಮುಕುಂದಾ || ಯೆಂಥಾ ಪಾಪಿಯೆಂದು ಉದಾಸೀನ ಮಾಡೀ ನೋಡಬೇಡ | ನಿನ್ನ ಕಂದಾನೆಂದು ತಿಳಿಮೂ ಪಾಲಿಸಯ್ಯ ನಾರಾಯಣಾ || ೪ || ಹನುಮ ಭೀಮಾ ಮಧ್ವೇಶಾರಿಂದಾ | ಸೇವಿತ ಪ್ರೀಯಾ | ಶಾಂತಮೂರ್ತೀ ಶ್ಯಾಮವರ್ಣನೇ || ಶ್ರೀದವಿಠಲೇಶಾ ನಿನ್ನಾ ದಾಸನೆಂದೂ ಪಾಲೀಸೆನ್ನ | ಸಾರಿ ಬೇಡಿಕೊಂಬೆನಯ್ಯ | ರಾಮಚಂದ್ರ ರಾವಣಾರಿ || ೫ || ಶ್ರೀಃ ||

## ೭೪. ಶ್ರೀರಾಗ, ಅಟತಾಳ.

ಭಾರತೀಶನೆ ಯೆನ್ನಾ | ಭವಜನಿತ ದುಃಖವ | ದೂರಮಾಡ್ವೆ ಘನ್ನಾ | ಸನ್ನುತವರೇಣ್ಯಾ || ಪಲ್ಲ || ವಾರವಾರಕೆ ಭಜಿಪೆ ನಿನ್ನ ಮು | ರಾರಿ ವಾರಿಜ

---

*ಈ ಪದ್ಯದಲ್ಲಿ ಯತಿ, ಗಣ, ಪ್ರಾಸಗಳು ಸಮವಾಗಿರದೆಂತಲೂ, ಕವಿತಾ ಲಕ್ಷಣ ವಿರೋಧವಾಗಿದೆ ಎಂತಲೂ ತೋರಬಹುದು. ಪರಂತು ದೊಡ್ಡವರು ರಚಿ ಸಿರುವ ವಿಚಾರದಲ್ಲಿ ಅನುಮಾನ, ಆಕ್ಷೇಪಗಳಿಗವಕಾಶ ಕೊಡಬಾರದು. ಈ ಪದ್ಯ ವನ್ನು ಈ ರೀತಿ ಮಾಡುವುದಕ್ಕೆ ಕಾರಣವಿದೆ. ಆ ವಿಷಯವನ್ನೆಲ್ಲಾ ಇಲ್ಲಿ ತಿಳುಹಿ ಸಲು ವಿಷಯ ಬಾಹುಳ್ಯವಾಗುತ್ತಾದ್ದರಿಂದ, ಅಪರೋಕ್ಷಜ್ಞಾನಿಗಳ ಮುಖದಿಂದ ಬಂದ ಶಬ್ದಗಳಾದ್ದರಿಂದ, ಅವಶ್ಯ ಗ್ರಾಹ್ಯ.

ಪದದಿ ಯೆನ ಮನ | ಸೇರಿಸ್ಯಾಂತದಿ ಮುಕುತಿಪಥವನು | ತೋರಿ ಪೊರೆ ಕರುಣಾಳು ಉತ್ತಮ || ಅನುಪಲ್ಲ || ವಾಯುಸುತ ಹೇ ಧೀರಾ | ಶ್ರೀರಾಮಕಿಂಕರ | ರಾಯ ಮಹಧುರ್ಧರಾ | ಸದ್ಗುಣಗಣಾಂಬುಧಿ | ಮಾಯಿದನುಜ ವಿಹಾರಾ | ಸುಚರಿತ್ರ ಶೂರಾ || ತೋಯಜಾಂಬಕನ ಸತಿಯ ಖಳ | ನಾಯಕನು ಬಂದೊಯ್ಯೆ ಕಪಟದಿ | ಜೀಯನೆ ವಾರಿಧಿಯ ಲಂಘಿಸಿ | ಕಾಯಜನ ಪಡೆದಾಕೆಗುಂಗುರ || ಜೀಯನಿತ್ತಲು ವನದೊಳಿಹ ಖಳ | ನಾಯಕರು ಬಂದ್ಹಿಡಿಯೆ ಅವರ | ಕಾಯ ಖಂಡಿಸಿ ತಿರುಗಿ ದಶರಥ | ಪ್ರೀಯನಿಗೆ ಸುಕ್ಷೇಮ ತಿಳುಹಿದ || ೧ || ಕುರುಕುಲಾಂಬುಧಿಸೋಮ | ನೆಂದೆನಿಸಿದಾ ಮಹ | ಗುರುಪರಾಕ್ರಮ ಭೀಮಾ | ದ್ರೌಪದಿ ಮನೋಜಯ | ಕರುಣವಾರಿಧಿ ಧಾಮಾ || ರಣರಂಗ ಭೀಮಾ || ದುರುಳ ದುರ್ಯೋಧನನು ನಿಮ್ಮನು | ಅರಗಿನಾಮನೆಯಲ್ಲಿ ಪೊಗಿಸಲು | ಹಿರಿಯ ಧರ್ಮಾದಿಗಳ ಕೈಕೊಂ | ಡ್ಹರುಷದಿಂದಲಿ ತೆರಳಿ ಬಂದಾ || ವರಹಿಡಿಂಬಕ ಕೀಚಕಾದ್ಯರ | ತರಿದು ಯದುಕುಲಜಾತ ಕೃಷ್ಣನ | ಪರಮ ಕಿಂಕರನಾಗಿ ಸತತದಿ | ಮೆರೆವ ಪಾಂಡವಜಾತ ಖ್ಯಾತಾ || ೨ || ಮಧ್ಯಗೇಹದೊಳ್ ಜನಿಸೀ | ವರವೀರ ವೈಷ್ಣವ | ಪದ್ಧತಿಗಳನುಸರಿಸೀ | ಮಾಯ್ಗಳ ಕುಭಾಷ್ಯವ | ಗೆದ್ದು ಗುರುವೆಂದೆನಿಸೀ || ಮಧ್ವಾಖ್ಯನೆನಿಸೀ || ಶುದ್ಧವೂಪುತಿ ಹರಿಯ ಪದ ಸ | ದ್ಭಕ್ತ ಜನಕೇ ಯೆಲ್ಲ ಭೇದವ | ತಿದ್ದಿ ತಿಳುಹಿದ ಮುನಿವರೇಂದ್ರ ಪ್ರ | ಸಿದ್ಧನಾದಪರಾಜಿತನೆ ಯೆ | ನ್ನುದ್ಧರಿಸುತಾ ಚಂದದಲಿ ಪ್ರ | ಸಿದ್ಧ ಮೌನಗಿರಿಯಲ್ಲಿ ನಿಂತಿಹ | ಮಧ್ವಪತಿವಿಠ್ಠಲನ ದೂತಾ | ಮುದ್ದು ಪ್ಲವಗಾಧೀಶ ಖೇಚರ || ೩ || ಶ್ರೀಃ ||

## ೭೫. ರಾಗ ಧನ್ಯಾಸಿ, ಅಟತಾಳ.

ಕರುಣಾದಿ ನೋಡೋ ಮ | ದ್ಗುರು ವಾದಿರಾಜ ನಂಬಿದ ಭಕತರ ಸುರತರುವೇ || ಪಲ್ಲ || ಪರಿಪರಿ ಭವಸಾ | ಗರದಲ್ಲಿ ಮುಳುಗುವ | ತರಳನ ಮರೆವದು ಥರವೇ || ಅನುಪಲ್ಲ || ವಾಗೀಶಮುನಿ ಕರಪದುಮ ಸಂಜಾತ ಹೇ | ಭಾಗವತಾಗ್ರಣಿ ಭರದೀ || ಆಗಮ ನಿಗಮವಿನುತ

ಹಯವದನನ್ನ | ಬ್ಯಾಗ ವಲಿಸಿದೆ ನೀ ಮುದದೀ | ಯೋಗಜಿತಾಸನನಾಗಿರುವನೆ ತಲೆ | ಬಾಗುವೆ ಭಯವಳಿ ತ್ವರದೀ || ೧ || ವಾದದೋಳ್ ವಾದಿಗಳನೆ ಗೆದ್ದು ಗುರುಮತ | ಸಾಧಿಸಿದೆಯೊ ಬಲವಂತಾ | ಕ್ರೋಧರಹಿತ ಪಂಚಭೇದ ಸುಜ್ಞಾನವ | ಬೋಧಿಸುವಾ ದಯವಂತಾ || ಸಾಧುಸೇವಿತ ನಿನ್ನ ಪಾದ ನಂಬಿದೆ ಭವ | ಬಾಧೆ ಕಳಿಯೊ ಮಹಾಂತಾ || ೨ || ಅತಿವಿಮಲನೆ ನಿನ್ನ ತುತಿಸಲರಿಯೆ ನಾನು | ಮತಿಮಂದನ್ಯೆ ಮಹದಾತಾ || ಸತತ ಬೇಡುವೆನು ಶ್ರೀಪತಿ ಭಜನೆಗೆ ಮನ | ಜಿತವಾಗಿಯಿರಲಯ್ಯ ತಾತಾ || ಕ್ಷಿತಿಯೊಳು ಕಂಡ ದುರ್ಮತಿಗಳ ಬಿಡಿಸೊದ | ಧಿಕವೇನೋ ಅನಾಥನಾಥ || ಪತಿತಪಾವನ|ರಮಾಪತಿವಿಠಲನ ನಿ | ರತ ನೊಳ್ಪಲಾತವ್ಯ ಖ್ಯಾತಾ || ೩ || ಶ್ರೀ ||

|| ಶ್ರೀಮಧ್ವೇಶಾರ್ಪಣಮಸ್ತು ||

### ೭೬. ರಾಗ ವರಾಳಿ, ಏಕತಾಳ.

ಮಾಯಿಗಳೀ ನಾಯಿಗಳೀ | ಬಾಯಿಗೆ ಬಂದಂತೆ ಬೊಗಳೂತಿಪ್ಪಾ || ಪಲ್ಲ || ನಿತ್ಯನಿತ್ಯ ಕೇವಲ ಜಗತ್ತು ಮಾಯಿಗಳೀ | ಸತ್ಯಾಪನ್ನಪೆ ಮಿಥ್ಯವೆಂಬುವ ನಾಯಿಗಳೀ || ೧ || ಮಿಂಚುವ ತರತಮ ಪಂಚಭೇದ ಮಾಯಿಗಳೀ | ವಂಚಿಸಿ ಶೂನ್ಯ ಪ್ರಪಂಚವೆಂಬುವ ನಾಯಿಗಳೀ || ೨ || ಶ್ರೀದವಿಠ್ಠಲ ಬ್ರಹ್ಮಾದಿವಂದ್ಯನ ಮಾಯಿಗಳೀ | ಪಾದಕ್ಕೆರಗಾದೆ ಒಂದಾದೆನೆಂಬ ನಾಯಿಗಳೀ || ೩ || ಶ್ರೀ ||

### ೭೭. ರಾಗ ಅಠಾನ, ರೂಪಕತಾಳ.

ವಾದಿಗಳೆಲ್ಲರನೇ ಗೆದ್ದ ವಾದಧೀರನೇ | ವಾದಿರಾಜ ಗುರುರಾಯ ಸಾಧುಪ್ರಿಯ ಗೇಯಕಾಯ || ಪಲ್ಲ || ಮುಂದುವರಿದ ಮಂದವಾದಿಗಳನು | ಒಂದು ಮಾತಿನಿಂದಲವರ | ಮುಂದೆಗೆಡಿಸಿ ಕಂದಿಸಿ ಕುಂದಿಸಿ | ನಂದದಿ ನಲಿವಾ || ೧ || ಮತ್ತವಾದ ಜನರ್ಗಳೆಲ್ಲ | ಸುತ್ತಮುತ್ತ ನೋಡುತಿರಲು | ಮತ್ತೆ ಅವರ ನೆತ್ತಿಯ ಕೊಣದು | ಹತ್ತಿದೆ ಮುತ್ತಿನ ಗದ್ದಿಗೆಯನ್ನು || ೨ ||

ನಿನಗೆ ಯೆಣೆಗಾಣೆ ನವ | ದಿನಪತೇಜ ಮಧ್ವಮುನಿಯ | ಮನದ ವಡೆಯ ಮುದ್ದು ಕೃಷ್ಣನ | ನೆನೆದ ತನುವನಲ್ಲವೇ || ೩ || ಶ್ರೀ ||

## ೭೮. ರಾಗ. ಪೂರ್ವಿ, ಏಕತಾಳ.

ವರ್ಣಿಸಲಳವೇ ಗುಣಸಾಂದ್ರನಾ || ಪಲ್ಲ || ಕರ್ಣಜನಕ ಕೋಟಿತೇಜ | ಶ್ರೀಶಭಜಕ ಜಯಮುನೀಂದ್ರನಾ || ಅನುಪಲ್ಲ || ಮಧ್ವಶಾಸ್ತ್ರದುಗ್ಧನಿಧಿಯ | ಬುದ್ಧಿಯೆಂಬ ಮಂದರಗಿರಿಯ | ಶುದ್ಧಸೂತ್ರ ನೇತ್ರದಿಂದ | ಬದ್ಧವ ಮಾಡಿ ಪಿಡಿದು ಕಡೆದು | ಶುದ್ಧಯುಕುತಿ ಸುಧೆಯ ತೆಗದನಾ | ಶಿಷ್ಯಜನಕೆ | ಶ್ರದ್ಧೆಯಿಂದಲವನು ಯೆರದನಾ | ಕ್ರೋಧದಿಂದ | ಕ್ರುದ್ಧವಾದಿ ದೈತ್ಯರ ಗೆಲಿದನಾ | ಜಯಮುನೀಂದ್ರನಾ || ೧ || ಮಾನಿನಿಯರ ಶೀಲರಾದ ಮಾನವರನು ಜರಿದು ಹರಿಯ | ಧ್ಯಾನವಲ್ಲಿ ನಿಲಿಸಿ ವಲಿಸಿ | ಹಾನಿಯಿಲ್ಲದ ಮುಕುತಿ ಪಡೆದ | ಜ್ಞಾನತಮವಿಹಂಗ ಸಾಲ್ವನಾ | ದೋಷದೂರ | ದಾನವಾರಿಯ ಕಥೆಯ ಪೇಳ್ವನಾ | ಶಿಷ್ಯಜನಕೆ | ಸಾನುರಾಗದಿ ತತ್ವ ಪೇಳ್ವನಾ | ಜಯಮುನೀಂದ್ರನಾ || ೨ || ಸರಸದಿಂದ ಮೂರು ಏಳು | ವಿರಸ ದುಷ್ಟ ಭಾಷ್ಯಗಳನು | ಗೆಲಿದಕ್ಷೋಭ್ಯತೀರ್ಥಯತಿಪ | ಕರಸಂಜಾತ ರಮ್ಯಚರಿತ | ಶರಣಜನರ ಪೊರೆವ ಯತಿಪನಾ | ಶಿಷ್ಯಜನರ | ದುರುಳ ಮೋಹತಿಮಿರ ದಿನಪನಾ | ನಮ್ಮ ಪರಮ | ಗುರು ಶ್ರೀಕೃಷ್ಣನ ಪಾದಭಜಕನಾ | ಜಯಮುನೀಂದ್ರನಾ || ೩ || ಶ್ರೀ ||

## ೭೯. ರಾಗ ವರಾಳಿ, ತ್ರಿಪುಟತಾಳ.

ನಾನಾ ಯೋನಿಗಳಲ್ಲಿ | ನಾನಾ ಜನ್ಮವನೆತ್ತಿ | ನಾನೂ ತಿರುಗಲಾರೆನೋ || ಪಲ್ಲ || ಶ್ರೀನಿವಾಸನೆ ನಿನ್ನ ಸೇರಿದವ್ಯಾಲುದಾ | ಹೀನ ಮಾಡುವರೇನೊ ಗೋವಿಂದಾ || ಅನುಪಲ್ಲ || ತಂದೆಯ ಉದರದೊಳ್ ತ್ರೈಮಾಸವೂ ಶುಕ್ರ | ಇಂದ್ರಿಯನಾಗಿದ್ದೆನೋ | ಅಂದಾದಿ ಜನನಿಯ ಜಠರದಿ ಶೋಣಿತ | ದಿಂದ ಪಿಂಡವು ಆದೆನೋ | ಕುಂದಾದೆ ಮಾಸ ನಾಲ್ಕಾದ ಗಲ್ಲವಯವ | ದಿಂದ ಬೆಳೆಯುತಲಿದ್ದೆನೋ | ಸಂಧಿಸೆ ಸಪ್ತ

ಮಾಸದಿ ಕುಲ ಗೋತ್ರದಿ ಬಂದಿದ್ದಣಿಸುತಿದ್ದನೋ ‖ ನರದ ಸಂಕೋಲಿ ಮಾಂಸದ ಚೀಲ ಬಲೆಯೊಳು | ನರಳಿ ಕೋಟಲೆಗೊಂಡೆನೋ | ಪರಿಪರಿ ಯಲಿ ಬಂದ ಪಾಪ ಪುಣ್ಯಗಳ | ಪಿರಿದು ಚಿಂತಿಸುತಿದ್ದೆನೋ | ನೆರೆ ಅಷ್ಟ ಮಾಸದೊಳ್ ರಾಶಿ ತೋಷದಿಂದ | ಕರೆಕಷ್ಟಗೊಳುತಿದ್ದೆನೋ | ಇರು ತಿರೆ ನವಮಾಸ ಕಳಿಯೆ ವಾಯುವಿನಿಂದ | ಧರೆಗೆ ಪತನವಾದೆನೋ | ಗೋವಿಂದಾ ‖ ೨ ‖ ಮಾಂಸ ಮಲದಿ ಸಲಮೊರದಿ ಮಲಗಿ ನೊಣನ | ಘಾಸಿಪಡುತಲಿದ್ದೆನೋ | ಹೇಸಾದೆ ಹಸಿದು ಬೆರಳು ಬಾಯೊಳಗಿಟ್ಟು | ತೋಷಿಪೆ ದುಃಖಿಪೆನೋ | ತೋಷಿಸಿ ಬಾಲೆ ದುರ್ಬಾಲೆನ್ನುತ್ತಾಲೋಹ | ಕಾಶಿ ಹಚ್ಚಿನುತಿಹಳೋ | ಈಸು ಭವಣಿಯಾ ಗರ್ಭದಿ ಜನ್ಮಗಳ ನಾ | ಸಾಸಿರವೆತ್ತಿದೆನೋ ‖ ೩ ‖ ಬಾಲತನದಿ ಬಲುವಿಧದಾಟವ ತೋರಿ | ಮೇಲಾಗಿರುತಿದ್ದೆನೋ | ಲೀಲೆಯಿಂದಲಿ ಪುಳು ಮೃಗಪಕ್ಷಿ ಮಾ | ಜಾಲಾ ಘಾತಕನಾಗಿದ್ದೆನೋ | ಖೂಳ ತಾನರಿದು ದುಷ್ಕೃತ್ಯವ ಮಾ ಡಿಯೆ | ಘಾಳಿಗೀಡಾಗಿದ್ದೆನೋ | ಹೇಳಬಾರದ ಪಾಪವ ಮಾಡಿ ನರಕದ | ಪಾಳೆಯಕೀಡಾದೆನೋ ‖ ೪ ‖ ಹೀಗಿರುತಿರೆ ಮುಂಜಿಮದುವೆಗಳೆಲ್ಲವು | ಆಗಿ ಬಾಳುತಲಿದ್ದೆನೋ | ಸೋಗಿಗಣ್ಣಿನ ಸುದತಿಯ ಕಂಡು ಜ್ಞಾನವ | ನೀಗಿ ಬಾಳುತಲಿದ್ದೆನೋ | ರೋಗವಿಲ್ಲದೆ ನರಳುವನಂತೆ ಕಾಮದ | ಬ್ಯಾಗೆಯೊಳ್ ಬೆಂಡಾದೆನೋ | ಆಗಲು ಪುತ್ರ ಬಾಂಧವರಿಗೋಸುಗ ಭವ | ಸಾಗರದೊಳು ಬಿದ್ದೆನೋ ‖ ೫ ‖ ಬಾಲ್ಯ ಯೌವನವಳಿದು ವಾರ್ಧಿ ಕ್ಯವಡಿಸಿ ಬಹು | ಬೀಳಾಗಿರುತಿದ್ದೆನೋ | ಕಾಲುಕೈಗಳು ಕುಗ್ಗಿ ಕಂ ಗಾಳು ಕ್ಷಯವೇರಿ | ಬೀಳುತೇಳುತಲಿದ್ದೆನೋ | ನಾಲಿಗೆ ಉಡುಗಿ ನರಗಳೆಲ್ಲ ಸಡಲೇರಿ | ಜಾಳಾಗಿರುತಿದ್ದನೊ | ಹಾಳುಕೋಟೆಗೆ ತಲೆ ಯನು ಕೊಟ್ಟು ಕಾದುವ | ಮೂಳಾನಂದದಿಯಿದ್ದೆನೋ ‖ ೬ ‖ ಪುಟ್ಟಿ ಸಾಕಿದ ಸುತ ಸುದತಿಯರಿಗೆ ಸಹ | ನಿಷ್ಟನೆನಿಸಿಕೊಂಡೆನೋ | ಬಿಟ್ಟ ಪ್ರಾಣವ ಕಡೆಗಾಗಲು ಶವವೆಂದು | ಮುಟ್ಟಾರೆನಿಸಿಕೊಂಡೆನೋ | ಅಟ್ಟಾ ಡವಿಯೊಳಿಟ್ಟು ಕಾಗೆ ದೇಹವ | ಕೊಟ್ಟು ತಿನಿಸುತಿದ್ದಾರೋ | ಕೆಟ್ಟ ಪಾಶದೊಳೆಮನಾಳುಗಳೆನ್ನನು | ಅಟ್ಟ ಸೆಳೆಯುತಿದ್ದರೋ ‖ ೭ ‖ ಹಾದಿ

ಯೊಳ್ ಪಿಡಿಯೆ ವೈತರಣಿಯೊಳ್ ಮುಳುಗಿಸೆ | ವೇದನಪಡು ತಿದ್ದೆನೋ | ಕಾದ ಕಾವಲಿ ಉಕ್ಕಿನ ಕಂಬ ಕೀವಿನ | ಸ್ವೇದಕುಂಡದಿ ಬಿದ್ದೆನೋ | ಭೇದವಿಲ್ಲದ ಪರ್ವತ ಗುಹ್ಯ ವೊದಲಾದ | ಭೇದನಬಡು ತಿದ್ದೆನೋ | ವಾದಿಸಿ ಹಿರಿಯರೊಳ್ ಮೀರಿ ನಡದು ಯಮ | ಬಾಧೆಗೆ ಗುರಿಯಾದೆನೋ || ೮ || ಎಷ್ಟೆಂದು ಕಳೆಯಬಹುದು ನರಕದೊಳಿಂತು | ಕಷ್ಟಪಡುತಲಿದ್ದೆನೋ | ಥಿಟ್ಟಮೂರುತಿ ನಿಮ್ಮ ಪಾದವ ಸ್ಮರಿಸದೆ | ಇಷ್ಟುಜನ್ಮದಿ ಬಂದೆನೋ | ಇಷ್ಟರ ವ್ಯಾಲಿನ್ನು ನೀನಾದರು ಕೈಯ | ಬಿಟ್ಟರುಳಿಯಲಾರನೋ | ಸೃಷ್ಟಿಯೊಳ್ ತುರುಗಿರಿವಾಸಚಲಾನಂದ ವಿಠ್ಠಲ ಸಲಹೊ ಯೆನ್ನಾ || ೯ || ಶ್ರೀ ||

## ೮೦. ರಾಗ ಭೂಪಾಳಿ, ಆದಿತಾಳ.

ರಕ್ಷಿಸೋ | ಕೃಷ್ಣಯ್ಯ || ಪಲ್ಲ || ರಕ್ಷಿಸೆನ್ನ ಕಮಲಾಕ್ಷನೆ ಕರುಣಕ ಟಾಕ್ಷದಿ ವೀಕ್ಷಿಸು | ಪೇಕ್ಷೆಯ ಮಾಡದೆ || ಅನುಪಲ್ಲ || ಅಬುಜಭವಾಂ ಡದಿ | ಪ್ರಭುವೆಂದೂ ನಿನ | ಗಭಿವಂದಿಪೆ ಯೆನಗಭಯ ಪಾಲಿಸೈ || ಇಭ ರಾಜವರದ ಶುಭ[illegible]ಶಾ ಈ | ಕುಭವಜ್ಞಜನ ಸಭಾ ಮಧ್ಯದಿ || ೧ || ದುರುಳನು ಯೆನ್ನನು ಶಿರಗು ಪಿಡಿದು ಬಲು | ಕರಕರಗೊಳಿಸುತ್ತಿರುವನು ಹರಿಯೇ || ಅರಿತವಳಲ್ಲ ಪರಿಭವಣೆಯ ಯದು | ವರನೆ ದ್ವಾರಕಾಪುರ ಮಂದಿರನೇ || ೨ || ಭಂಡ ಯೆನ್ನ ಮುಂಕೊಂಡೊಯ್ದು ನೆರದು | ಹಿಂಡು ಮಂದಿಯೊಳ್ ಭಂಡುಮಾಳ್ಪನೆಂ || ದಂಡಲಿಯುತ ಹೆಮ್ಮೆಂಡೆ ಬಾಗಿ ಬೊ | ಬ್ರಾಂಡದೊಡೆಯ ಕೇಳ್ | ಪಂಢರಿರಾಯ || ೩ || ಅನ್ಯನಲ್ಲ ಯೆನಗಣ್ಣ ನೀನು ಸಂ | ಪನ್ನನೆ ತ್ರಿಜಗ | ನ್ಮಾನ್ಯಮಾನದಾ || ಪನ್ನರಕ್ಷಕ ಕಾ | ರುಣ್ಯಾಂಬುಧೆ ಈ | ಬನ್ನಬಿಡಿಸುವರು ನಿನ್ಹೊರತುಂಟೇ || ೪ || ಪತಿಗಳೈವರೂ ಚ್ಯುತಬಲರಾದರು | ಕ್ಷಿತಿಯೊಳು ನಿನಗೆ ಸಮ್ಮತದಾ ವದೊ ಅದೆ || ಹಿತವೆಂದರಿತು ಸುಮ್ಮನೆ ಕುಳಿತಿಹರು | ರತಿಪತಿ ಪಿತನೆ ಭಾರತಿಪತಿ ಪ್ರೀಯಾ || ೫ || ಮಂಗಳಮಹಿಮ ಶು | ಭಾಂಗ ಸೌಖ್ಯದಾ | ನಂಗಜನಕ ಕಾ | ಳಿಂಗಮಥನ || ತುಂಗವಿಕ್ರಮ ಭು | ಜಂಗಗಿರಿ ನಿಲ ಯ | ರಂಗನೆ ಈಶ್ರಮ ಹಿಂಗಿಸು ಮದದೀ || ೬ || ಶ್ರೀಪದ್ಮಜಭವ

ರಾಪತ್ತಿಗನೆಂ| ದೀಪರಿ ತಿಳಿದು ನಾಪೊಡವುಡುವೆ || ನೀಪಾಲಿಸು ಬಂದಾಪತ್ತು ಕಳೆದು | ಶ್ರೀಪತಿವಿಠಲ ಸುರಾಪಗ ಸೇವ್ಯ || ೭ || ಶ್ರೀ೩ ||

॥ ಶ್ರೀಮಧ್ವೇಶಾರ್ಪಣಮಸ್ತು ॥

### ೮೧. ರಾಗ ಧನಾಸರಿ, ಆದಿತಾಳ.

ಹರೇ ವೇಂಕಟಾ ಶೈಲವಲ್ಲಭಾ | ಸ್ಮರಿಸುವೆ ನಾ ನಿನ್ನಾ || ಪಲ್ಲ || ಕರುಣಾಪೂರ್ಣ ವರಪ್ರದ ಚರಿತಾ ಪರಿಪಾಲಿಸು ಯೆನ್ನಾ || ಅನುಪಲ್ಲ || ಪತಿತಪಾವನಾ ನತಜನ ಅತಿಹಿತ | ದಿತಿಜಮಥನ ರಂಗಾ || ಸತತಾಚ್ಯುತ ಆಶ್ರಿತ ಸುರತರು ಸಂ| ತತ ಸುಗುಣ ರಂಗಾ || ೧ || ದೋಷದೂರ ಪಾರಾಶರಾರ್ಚಿತ | ಕ್ಲೇಶನಾಶ ದೇವಾ || ವಾಸುದೇವ ಸರ್ವೇಶ ಸಾಧುಜನ | ಪೋಷ ಸುಪ್ರಭಾವಾ || ೨ || ಅಜಭವ ನುತಪದ ದ್ವಿಜಧ್ವಜಗಮನಾ | ಭಜಕರ ಭಯಹಾರೀ || ತ್ರಿಜಗಪೋಷಕಾ ಶ್ರೀಪತಿವಿಠಲಾ ನಿಜಜನರುಪಕಾರೀ || ೩ || ಶ್ರೀ೩ ||

### ೮೨. ರಾಗ ಕಮಾಚ್, ರೂಪಕತಾಳ.

ಈತ ರಂಗನಾದ ಹರಿಯು | ಆತ ಲಿಂಗನಾದ ಹರನು || ಪಲ್ಲ || ಗಿರಿಜಾಪತಿಯಾದನಾತ | ಗಿರಿಯ ಬೆನ್ನಲಿ ತಾಳಿದನೀತ || ಸ್ಮರನ ಮಡುಹಿದಾತನಾತ | ಸ್ಮರನ ಜನಕನಾದನೀತ || ೧ || ಶೇಷಭೂಷಣನಾದನಾತ | ಶೇಷಶಾಯಿಯಾದನೀತ || ಪೋಷಿಪಾ ಭಕ್ತಾರನಾತ | ದೋಷದೂರನಾದನೀತಾ || ೨ || ಕಂಗಳು ಮೂರುಳ್ಳವನಾತ | ಮಂಗಳಾ ದೇವೇಶನೀತ || ತುಂಗಹೆಳವನ ಕಟ್ಟೀ | ರಂಗನೀತ ಲಿಂಗಾನಾತ || ೩ || ಶ್ರೀ೩ ||

### ೮೩. ರಾಗ ಭವಪ್ರಿಯ, ಮಟ್ಟೆಭಾಪುತಾಳ.

ಕಂಜಮುಖಿ ಕೇಳಕ್ಕೋ | ಮಂಜುಳದ ಮುರಳಿಯ || ಪಲ್ಲ || ಮಂಜುಳದ ಮುರಳಿಯ | ಮಂಜುಳದ ಮುರಳಿಯ || ಅನುಪಲ್ಲ || ನಂಜೂಧರನ ಫಣಿಯೊ | ಳಂಜದಲೆ ಕುಣಿದಾ ನಿ | ರಂಜನನ ಮೋಹಿಸುತ | ಕುಂಜವನದೊಳಾಡುವ || ೧ || ಸಂಜೆಯಲಿ ಬಂದು ನಮ್ಮ | ಮುಂಜೆರ

ಗ್ಗಿಡೀದೆಳದಾ ನಿಲ್ಲ | ಲಂಜಿಕ್ಯಾಗುತಲಿದೆ | ಕುಂಜವನದೊಳಾಡುವ || || ೨ || ಸಂಜಯುಗೊಲಿದಾ | ಬಾದರಾಯಣ ವಿಠಲಾ | ನಿಲ್ಲಲಂಜಿಕ್ಯಾಗುತಲಿದೆ | ಕಂಜಶರನ ಬಾಧೆಗೆ || ೩ || ಶ್ರೀ೬ ||

## ಶ್ರೀಕೃಷ್ಣಪಾರಿಜಾತ.

### ೮೪. ರಾಗ ನಾದನಾಮುಕ್ರಿಯೆ, ಅಟತಾಳ.

ರಂಗ ರಾಜಧಾನಿಗ್ಹೋದನೇ | ರಾಜವದನೇ || ಪಲ್ಲ ||

**ಶ್ಲೋಕ** ॥ ಸಖೀ ಕೃಷ್ಣನಾ ಸಂದು ವಂದಿಷ್ಟು ಕಾಣೇ | ಮುಖಾ ನಿಮ್ಮದೂ ಮುಸುಕಿತ್ಯಾತಾಕೆ ಜಾಣೆ || ಸುಖಾ ಯೆನ್ನೊಳೂ ಸುಖಿಸಲಿಲ್ಲಾ ನಿನ್ನಾಣೆ | ಸಖಾನೆಲ್ಲಿಗೇ ಸಾಗಿಪೋದನೆ ಕೃಪಾಣೆ || ೧ ||

**ಪದ** ॥ ಮಧುರಿಯಿಂದಲಿ ಒಬ್ಬ ಬಂದನೇ | ಹಬ್ಬವೆಂದನೇ | ಕದಲೀರಿ ಯೆಂದಾನೆ | ಪದುಮನಾಭನು ರಥ ತರಿಸಿದ | ಅನುಸರಿಸಿದಾ | ಬಲರಾಮನೇರಿಸಿದಾ || ಉದಕ ನೆವದಿ ಪೋಗಿ ಕಂಡೆವೇ | ಮುತ್ತಿಕೊಂಡೆವೇ | ಕಳವಳಗೊಂಡೆವೇ | ಚದುರ ನಮ್ಮನು ಬಿಗಿದಪ್ಪಿದಾ | ಮುದ್ದುಗುಪ್ಪಿದಾ | ನಿನಗೇವೆ ತಪ್ಪೀದಾ || ೧ ||

**ಶ್ಲೋಕ** ॥ ನೆರೇಲಿಪ್ಪಳೇ ನೆಚ್ಚಿಯಿದ್ದೇನೆ ನಿನ್ನಾ | ಕರಿಂಬಾರದೇ ಕಾಂತ ಪೋಪಾಗ ಯೆನ್ನಾ || ಅರೀತಿದ್ದರೆ ಅಟ್ಟೆ ಪೋಗೂವೆ ಬೆನ್ನಾ | ಹರೀ ಮಾಡಿದಾ ಹರುಷ ವಿಶ್ವಾಸ ಘನ್ನಾ || ೨ ||

**ಪದ** ॥ ಕುಂಭವಿಳಿಸಿ ನಾರಿಯರು ಕೂಡೀ | ಕಾಂತನ ನೋಡಿ | ಯೋಚನೆಗಳ ಮಾಡೀ | ಅಂಬುಜಾಕ್ಷನ ಬೆನ್ನ ಬಿದ್ದೆವೇ | ಬಿಡದಿದ್ದೆವೇ | ಮನದೋಳು ಕುದ್ದೇವೇ || ರಂಭೆರೊಬ್ಬೊಬ್ಬರ ಕರೆದನೇ | ಅಪ್ಪಿ ಮೆರದಾನೇ | ಕುಚ ನಖದಿಂದಿರಿದನೇ | ಚುಂಬಿಸಿ ತಾಂಬೂಲ ನೀಡಿದಾ | ಮರುಳು ಮಾಡಿದಾ | ಮರೆಯದ್ಹಾಗೆ ಮಾಡೀದಾ || ೨ ||

**ಶ್ಲೋಕ** ॥ ವನಾಕ್ರೀಡೆಗೇ ಒಬ್ಬಳಾ ಕರೆಸಿ ಅಂದೂ | ವನಾಜಾಕ್ಷನು ವಾಕ್ಯ ಕೊಟ್ಟಿದ್ದ ಒಂದೂ || ನೆನಾಸೀದರೆ ನೆನೆವೆ ನಾ ನಿನಗೆ ಬಂದೂ | ಘನಾಶ್ಯಾಮನೂ ಘಾತಮಾಡೀದನಿಂದು || ೩ ||

**ಪದ** ॥ ಅಂದಿಗೆ ಹಾಗೆ ಅಂದಿದ್ದನೇ | ಅಬದ್ಧನೆ | ಕಾಲೋಚಿತ ಕೈದಾನೇ | ಹಿಂದಿನ ಮಾತು ಹಂಗಿಸಲಾಗ | ನೋಡುವ ಮೊಗ | ಸಂತೈಸಿದನಾಗಾ || ಬಂದು ನಿಮ್ಮನು ಕೂಡದಿದ್ದನೇ | ಅಲ್ಲಿದ್ದನೇ | ಬಾರಾದಲೆ ಇದ್ದನೇ | ನಂವಗೋಪ ಗೋಪಿಯರಾಣೇ | ಯಿಟ್ಟನು ಜಾಣೆ | ಯೋಚನೆಯ ಪ್ರವೀಣೇ || ೩ ||

**ಶ್ಲೋಕ** ॥ ಬಹೂಶಾ ಖರೇ ಬಂದ ಅಕ್ರೂರ ಬಾಲೆ | ಕುಹಾಕಾದರೂ ಕಟ್ಟುವೇ ಕಾಣುತಾಲೆ || ಮುಹಾಸ್ನೇಹವೇ ಮಾಧವಾಗ್ಯೆನ್ನ ಮ್ಯಾಲೇ | ಸಹಸ್ರಾದರೂ ಸಾಗ ಕಾರ್ಯಲ್ಲದಾಲೆ || ೪ ||

**ಪದ** ॥ ಅಕ್ರೂರನೆಂದು ಆತನ ಯಾಕೇ | ಕರಿಯಲು ಬೇಕೇ | ಆತನ ಭಾಗ್ಯ ಸಾಕೇ | ವಕ್ರವಾದನು ನಮ್ಮ ಕ್ರೀಡಿಗೇ | ತನ್ನ ಜೋಡಿಗೇ | ಕಾಂತನನ್ಯೆದ ಕಡಿಗೇ || ಚಕ್ರಧರನು ಯಾಕೆ ಪೋದನೇ | ಕಾರ್ಯ ಶೋಧನೆ | ಪರಿಪೂರ್ಣ ಬೋಧಾನೇ | ಠಕ್ಕನಾಡಿದರೆನಿಂದಿರ | ಧೃತಮಂದಿರ | ಪುರುಷರೊಳು ಸುಂದರ || ೪ ||

**ಶ್ಲೋಕ** ॥ ಉದಾಸೀನವಾ ಊರನಾರೇರ ಮಾಡೀ | ಹದಾ ತಪ್ಪಿದಾ ಹಬ್ಬದಾ ನೆವನ ಮಾಡೀ || ಮಧುರೀಯೊಳೂ ಮಾನುನೀಯಾರ ನೋಡೀ | ಮಧೂಸೂದನಾ ಮೆಚ್ಚಿಹೋದಾನೆ ಓಡೀ || ೫ ||

**ಪದ** ॥ ಮಿಂಚುವ ನಿಂಬಫಲಗಳಂತೇ | ಕುಚಗಳು ಕಾಂತೇ | ಆದವ್ಮ್ಯಾಲತಿಭ್ರಾಂತೇ | ಕಂಚುಕವಡದ ಮಯ್ಯಾ ಬಣ್ಣಾ | ಉಳ್ಳಾ ಹೆಣ್ಣಾ | ಗಳ ಮ್ಯಾಲಿಟ್ಟ ಕಣ್ಣಾ || ಕುಂಚಿತವಾದ ಚುಂಚುಗುರುಳೂ | ಮತ್ತವರೊಳು | ಮಾಡಿದನೇ ಮರುಳೂ | ಪಂಚಬಾಣಗೆ ಗುರಿಯು ನಮ್ಮಾ | ಮಾಡಿದ ನಮ್ಮ | ಹ್ಯಾಗೆ ತಾಳ್ವೆ ಪೇಳಮ್ಮಾ || ೫ ||

**ಶ್ಲೋಕ** ॥ ಕೊಳಾಲೂದುತಾ ಕೌಮುದಿಯಾ ವಳಾಗೇ | ನಳೀನಾಕ್ಷನು ನಮ್ಮ ಮಾಡೀದ ಹೀಗೇ || ಕಳಾವಾಳಿಕೆ ತನ್ನ ನೋಡೂವ ಹಾಗೆ | ಕೆಳಾದೇರನೂ ಕಂಗೆಡೀಸುತ್ತ ಪೋಗೆ || ೬ ||

**ಪದ** ॥ ಕೃಷ್ಣ ಯೆನ್ಮೊಳು ಮಾಡುವ ಲೀಲೇ | ಮಾಡುವ ವ್ಯಾಕುಳೀ | ಆತನ ಕಂಡಾ ಮ್ಯಾಲೇ | ದೃಷ್ಟಿಚೂಟಗಳ ಸನ್ನೆಯು

ಮಾಡೀ | ದೃಷ್ಟಿಸಿ ನೋಡೀ | ವಿನಯದೊಳು ಕೂಡೀ || ಪಟ್ಟಣಾ ದಬಲೇರು ಸುಮ್ಮನೇ | ಬಿಡುವಾರೇನೇ | ನಿಮಗೇ ಮತ್ಸರಾನೇ | ಇಷ್ಟು ಮಾಡೋದು ಖರೀಯಾವೆ | ಮೊದಲರಿಯವೇ | ಅತ್ಯಂತನರಿಯವೇ || ೬ ||

**ಶ್ಲೋಕ** || ನಿಶಾಕಾಲದೀ ನಿನ್ನ ನಮ್ಮನಿಗೆ ಬಂದೂ | ವಸೂಧೀಶನೂ ಮಾವನ ಕೊಲ್ಲೂವೆನೆಂದೂ || ವಸೂದೇವ ದೇವಕಿಯರಾ ಕಷ್ಟದಿಂದಾ | ಬಿಸಾಜಾಕ್ಷನೂ ಬಿಡಿಸಿ ಕಾಹೂವೆನೆಂದಾ || ೭ ||

**ಪದ** || ಏಕಾಂತದಲ್ಲಿಯಲ್ಲೀ ಕೇಳಿ | ನಮ್ಮಗೆ ಹೇಳೀ | ನೀನೇ ಮಹಾ ಖೂಳೀ | ಲೋಕಾಂತದಲ್ಲಿ ನಮ್ಮಾ ಹಾಂಗೇ | ಅರಿಯಾದ್ವ್ಯಂಗೇ | ಮಾಡುವದಷ್ಟು ನಂಗೇ || ಬೇಕಾಗಿ ಮಥುರಾಪಟ್ಟಣ ಖ್ಯೋಗೀ | ಕಂಸನ ನೀಗೀ | ಅರಸಾಗಬೇಕಾಗೀ || ೭ ||

**ಶ್ಲೋಕ** || ಪುರಾವಾಳನೂ ಪೂರ್ವಪುಂಸಾನ ಬಿಟ್ಟೂ | ಶರಾಧೀಯೊಳು ಶರಧಿ ವಿಂಗಡಿಸಿ ಕೊಟ್ಟೂ || ತರೂಣೇರಿಗೇ ತಾಂಬಲೂ ರೂಪ ಕೊಟ್ಟೂ | ಪೊರಾದೇನೆಂದೂ ಹೇಳಿಯಿದ್ದಾನೆ ಗುಟ್ಟೂ || ೮ ||

**ಪದ** || ಖರೆಯಾನೆ ನಿನ್ನೊಳಾಡೀದರೆ | ಕೇಳಲಿ ನೀರೆ | ನಮಗೆ ಯಾರು ಯೆದೂರೆ | ಶರಣನು ಹೌದು ನಂದನ ಕಂದಾ | ಹಿಂದಕೆ ಬಂದಾ | ದುರಿತಗಳೆಲ್ಲ ಕೊಂದಾ || ಮರೆಹೊಕ್ಕರೇ ಕಾವ ಬಿರುದಂಕಾ | ಕುಬುಜೆಯ ಡೊಂಕಾ | ತಿದ್ದಿದ ನಿಷ್ಕಳಂಕಾ | ಕರುಣಾಳು ಮಧ್ವೇಶ ವಿಠ್ಠಲ | ಭಕ್ತರಾ ಪಾಲ | ನಮ್ಯಾಲತಿಲೋಲಾ || ೮ || ಶ್ರೀ ||

## ೮೫. ರಾಗ ಧನಾಸರಿ, ಝಂಪೆತಾಳ.

ರಥ ಹೋಗದಾ ಮುನ್ನೆ ಗೋಕುಲಕೆ ಮನ್ನನೋ | ರಥ ಹೋಗಿರುವು ದೇನೆಂಬೇ || ಪಲ್ಲ || ಅತಿಕೌತುಕವದಾಯ್ತು ಖಳರಾಯನೊಲಿದು ಯದು | ಪತಿಯ ಕರೆತರುವುದೆಂದನಗೆ ಪೇಳಿರಲಿಕ್ಕೆ || ಅನುಪಲ್ಲ || ಪತಿತರ್ಗೆ ನಾವು ದುರ್ಲಭವಲಾ ಯೆನಗೆ ಶ್ರೀ | ಪತಿಸೇವೆ ತಾನಾಗಿ ದೊರದೂ | ಶತಸಹಸ್ರಾನಂತನಂತ ಜನುಮಗಳ ಸು | ಕೃತಕೆ ಫಲವಾಯಿತೆಂದರಿದೂ | ಗತ ಕಿಲ್ಬಿಷಾನಾದೆನೆಂಬುದಕಿದೇ ಸಾಕ್ಷಿ | ಪಥದೊಳಗೆ ತಾವೆ ಮುಂದರಿದೂ ||

ಮಿತಿಯಿಲ್ಲದಲಿ ಮಹಾ ಶಕುನಂಗಳಾಗುತಿವೆ | ಪ್ರತಿಯಿಲ್ಲವೀಶುಭೋದಯಕೆ ಸೂರ್ಯೋದಯಕೆ || ೧ || ಶ್ರೀಪದ್ಮಜಾದಿಗಳು ಸೇವಿಸುವ ಚರಣ ಯುಮ | ನಾಪುಳಿನದಲಿ ಮೆರೆವ ಚರಣಾ | ಗೋಪಿಯರ ಪೀನ ಕುಚಕುಂಕುಮಾಂಕಿತ ಚರಣ | ತಾಪತ್ರಯಾವಳಿವ ಚರಣಾ | ಗೋಪುರದ ಶಿಲತೃಣಾಂಕುರುಹ ತೋರುವ ಚರಣ | ಆಪದ್ಬಾಂಧವನ ಚರಣಾ | ನಾಪೇಳಲೇನು ಭಕತರವತ್ಸಲಾನು ಕರು | ಣಾಪೂರ್ಣ ಯೆನಗಭಯ ಕೊಡುವ ಕರಪಿಡಿವಾ || ೨ || ನೋಡುವೆನು ನೀರದಶ್ಯಾಮ ಸುಂದರನ ಕೊಂ | ಡಾಡುವೆನು ಕವಿಗೇಯನೆಂದೂ | ಮಾಡುವೆನು ಸಾಷ್ಟಾಂಗ ದಂಡಪ್ರಣಾಮ ಕೊಂ | ಡಾಡುವೆನು ಕೈಮುಗಿದು ನಿಂದೂ | ಬೇಡುವೆನು ಭುವನೈಕದಾತನೆಂದಲ್ಲಿ ಕೊಂ | ಡಾಡುವೆನು ದಾಸ್ಯ ಬೇಕೆಂದೂ | ಈಡಿಲ್ಲದಿಂದಿನಾ ಮನಕೆನ್ನ ಬಯಕೆ ಕೈ | ಗೂಡುವದು ನಿಸ್ಸಂದೇಹ ದೈವಸಹಾಯ || ೩ || ಇರುವನೋ ಯೇಕಾಂತದೊಳಗಿರುವ ಕೇಳಿದಿರು | ಬರುವನೋ ಬಂದವನ ಕಂಡೂ | ಕರೆವನೋ ಕಿರಿಯಯ್ಯ ಬಾರೆಂದು ಬಿಗಿದಪ್ಪಿ | ಬೆರೆವನೋ ಬೆರಸಿಯದನುಂಡೂ | ವರೆವನೋ ವಡಲ ಧರ್ಮವನೆಲ್ಲ ವರಗಿಸಿ | ಜರಿಯನೋ ಜಗದೀಶ ಹಗೆಯುವನೆನುತ ಬಗೆಯ || ೪ || ಗೋಧೂಳಿ ಲಗ್ನಕ್ಕೆ ಗೋಕುಲಕೆ ಬಂದು ಬೆರ | ಗಾಗಿ ಹೆಜ್ಜೆಗಳ ನೋಡಿ | ಭೂದೇವಿಗಾಭರಣವೆನುತ ತೇರಿಳಿದು ಶ್ರೀ | ಪಾದರಜದೊಳಗೆ ಹೊರಳಾಡೀ | ಗೋದೋಹನದೊಳಿದ್ದ ರಾಮಕೃಷ್ಣರ ಕಂಡು | ನಾಧನ್ಯಧನ್ಯನೆಂದಾಡೀ | ಶ್ರೀವಿಠ್ಠಲ ಯೆರಗುವನಿತರೊಳು ಬಿಗಿದಪ್ಪಿ | ಸಾದರಿಸಿದನು ಇದೇ ಸದನದಲಿ ಸ್ವಪ್ನದಲಿ || ೫ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೮೬. ರಾಗ ಕೇತಾರಗೌಳ, ಅಟತಾಳ.

ಸೂಳೇಗೆ ಸೋತು ನಡೆವನ ಬಾಳು ಬಿರು | ಗಾಳಿಗೊಡ್ಡಿದ ದೀಪವೋ || || ಪಲ್ಲ || ಚಾಳೀಸಿ ನಿನ್ನ ದ್ರವ್ಯವನೆಲ್ಲ ಸುಲಕೊಂಡು | ಜೋಳಿಗೆಯನು ಕೊಡುವಳೋ | ಯೇಜಾಣಾ || ಅನುಪಲ್ಲ || ಯೆಲ್ಲಾ ಹೆಂಗಸರಂತೆ

ಬೆಳ್ಳಿಭಂಗಾರದೊ | ಳಿಲ್ಲೆನ್ನ ಮನಸೆಂಬಳೋ || ಯೆಲ್ಲಿ ನಿನ್ನಯ ಸ್ನೇಹ ಅಲ್ಲಿ ಯೆನ್ನಯ ಪ್ರಾಣ | ಸುಳ್ಳಲ್ಲ ಧಿಟವೆಂಬಳೋ || ಒಳ್ಳೆಮಾತುಗ ಳಾಡಿ ಮರಳುಮಾಡಿ ಮನೆಯೆಲ್ಲ ಸುಲಿದುಕೊಂಬಳೋ | ಯೋಜಾಣಾ || || ೨ || ಉಬ್ಬಿಕೊಬ್ಬಿದ ವಿಟರ್ಬರಲು ಮೋಹದಿ ಅವ | ರಿಬ್ಬರ ನಿಲಿಸು ವಳೋ || ಒಬ್ಬನ ನೋಡುತ್ತ ಒಬ್ಬನೊಳ್ಮಾತಾಡಿ | ಹುಬ್ಬು ಹಾರಿಸುತಿಹ ಳೋ || ಇವ|ರಿಬ್ಬರವಂಚಿಸಿ ಇರುಳು ತರಳೆ ಮತ್ತೊಬ್ಬನ ಕೂಡುವಳೋ | ಯೋಜಾಣಾ || ೨ || ಇನಿತೆಲ್ಲ ಸೆಳಕೊಂಡು ಬಳಿಕ ಆಪುರುಷನ | ತೃಣ ಮಾಡಿಕೊಂಬುವಳೋ || ಗುಣವುಳ್ಳ ಶ್ರೀವೆಂಕಟೇಶನೋಳ್ ರಮಿಸುತ್ತ | ಅನುದಿನದೀ ಬಾಳ್ವಳೋ || ಮುನ್ನ ನೀಯೆನಗೆ ಗುತ್ತಿಗೆ ಮಾಡಿದಾ ಪ್ರವ್ಯ | ವನ್ನು ಕೊಡು ಬಾಯೆಂಬಳೋ | ಯೋಜಾಣಾ || ೩ || ಶ್ರೀ || 

೮೭. ರಾಗ ಹಿಂದುಸ್ಥಾನಿ ದೇಶಿ, ಅಟತಾಳ.

ಗಂಡ ಕಲ್ಲಿಸಿದ ಹಾದರಾ ನಾನೇನ ಬಲ್ಲೆನೇ | ನೆರಮನೆ ತುಂಡು ಮುಂಡೇರಾಡಲಿಕ್ಕವರಂಜಿಕಿನ್ನೇನೇ || ಪಲ್ಲ || ಪೂರ್ವದಲ್ಲಿ ಐದುಮಂದಿ ಊರಗೌಡರ ಹೋಗುತಿದ್ದೆ | ಆರುಮಂದಿ ಹುಡುಗರನ್ನು ದೂರಮಾ ಡಿದ್ದೇ || ಬೇರೆ ಒಬ್ಬಾ ಪುರುಷ ಬಂದೂ ಪಾರಮಾಡೀ ಕರೆದು ವೊಯ್ದು | ಭಾರಿಗುಣದವಳೆಂದು ಮುತ್ತಿನಹಾರ ಕೊಟ್ಟಾನೆ || ೧ || ಪಟ್ಟೆಮಂಚ ಹಾಕಿ ನಾನು | ಮುಟ್ಟಸೀ ಮಲಗಿದ್ದೆ | ಜೋತಿ | ಅಷ್ಟ ಮಲ್ಲಿಗೆ ಸರಗಳನ್ನೂ ಎದುರಲಿಟ್ಟಿದ್ದೇ || ಪುಟ್ಟಪಟ್ಟಾವಾಳಿ ಸೀರೆನಿಟ್ಟನೆರಗೆ ಹೊಯ್ದುದ್ದೇ | ಮುಟ್ಟಕೊಂಡಾರವನ ಸುಖವಿನ್ನೆಷ್ಟು ಹೇಳಾಲೇ || ೨ || ವಾಲಿಝುಮುಕೀ ಬುಗಡಿ ಬಾವಲಿ | ಮೇಲೆ ರಾಗುಟಿ ಚೌರಿನಿಟ್ಟಿ | ಬಾಲೆ ಕೇಳೆ ಕುಂದಣಾದ ಮೂಗ್ತಿನಿಟ್ಟೇನೇ || ವಾರಿನೋಟಾದೊಲವಿ ಗಿನ್ನು | ಸಲ್ಲದವಳಿನ್ಯಾರು ಚದುರೆ | ಲೋಲಕೂಟ ಕಮಲೇಶವಿಠಲ ಮಾಡು ಯೆಂದನೇ || ೩ || ಶ್ರೀ ||

೮೮. ರಾಗ ನವರೋಜು, ರೂಪಕತಾಳ.

ಆಡಹೋಗುವಾ | ಬಾರೋ ರಂಗ || ಪಲ್ಲ || ಆಡಹೋಗುವ ಬಾರೂ ರಂಗಾ | ಕೂಡೆ ಕಾಳಿಂದಿತೀರದಲ್ಲಿ | ನಾಡಗೊಲ್ಲರ ಹೆಂಗಳಿಗೆಲ್ಲ |

ಬೇಡಿದಿಷ್ಟಾರ್ಥಗಳ ಕೊಡುವಾ || ಅನುಪಲ್ಲ || ಆಣಿಕಲ್ಲು ಗೋಲು ಗಜ್ಜುಗ | ಚಿಣ್ಣಿಕೋಲು ಚಂಡು ಬುಗರಿ | ಕಣ್ಣಮುಚ್ಚಾಲೆ ತುಂಟೆ ಹಲಪೆ | ಬಣ್ಣಬಣ್ಣದಾಟಗಳನು || ೧ || ಸೋಲುಗೆಲುವಿಗೆಲ್ಲ ನೀನೆ | ಪಾಲುಗಾರನಾಗಿ ನಮ್ಮ | ಮೇಲೆ ಮಮತೆಯಿಟ್ಟು ನಾನು | ಕೂಲನಾಗಿ ಕಯ್ಯ ಪಿಡಿಯೋ || ೨ || ಮೆಟ್ಟುಮೆಟ್ಟು ಕೋಲು ಕೈಲಿ | ಕಟ್ಟು ಬುತ್ತಿ ಕೊಳಲು ಕಂಬಳಿ | ಧಿಟ್ಟ ಗೋವಳರಾಯ ಶ್ರೀದ | ವಿಠಲಯ್ಯ ಯಾಕೆ ತಡವೋ || ೩ || ಶ್ರೀ ||

## ೪೯. ರಾಗ ಸೌರಾಷ್ಟ್ರ, ಏಕತಾಳ.

ಮಾರುತನಿಗೆ ಮಂಗಳಾರತಿಯೆತ್ತುವೆ | ಧೀರರೆಲ್ಲರು ನೋಡುವರೆ ಬನ್ನೀ || ಪಲ್ಲ || ಶ್ರೀರಮಣೀಯ ಕುಮಾರನೆನಿಸಿದಂಥ | ಭಾರತೀವರ ಶೇಷಾಧಾರ ಕೂರುಮುನಿಗೆ || ಅನುಪಲ್ಲ || ಇಂದ್ರಾರಿ ಕರದಿಂದ ನೊಂದ ಕಪಿಗಳನ್ನು | ತಂದ ಸಂಜೀವನಗಿರಿಯಂದದಲೀ || ಮುಂದಭಾವವ ಕಳೆ ವಂದು ಪರ್ವತವನ್ನು | ನಿಂದಲ್ಲಿಂದಾಲೆ ಹಿಂದಕ್ಕೆ ಬಿಸುಟಂಥ || ೧ || ವೈಷ್ಣವರಿಗಳೊಳು ಶ್ರೇಷ್ಠನೆನಿಸಿದಂಥ | ದುಷ್ಟ ಜರಾಸಂಧ ಕೋಷ್ಟವನು || ಮೆಟ್ಟಿ ಮುರಿದು ಪರಮೇಷ್ಠಿ ಯಾಗವ ಮಾಡಿ | ಕೃಷ್ಣಗೆ ಪರಮ ಸಂತುಷ್ಟಿಪಡಿಸಿದಂಥ || ೨ || ಮೂರೇಳು ದುರ್ಭಾಷ್ಯ ಖಂಡಿಸಿ ಕೃಷ್ಣನ್ನ | ದ್ವಾರಕದಿಂದಿಲ್ಲಿಗೇ ಕರಿಸೀ || ಧಾರುಣೀಶ ವೆಂಕಟಾಚಲ ಪತಿಯೆಂದು | ತೋರಿದ ಸಜ್ಜನೋದ್ಧಾರ ಯತೀಂದ್ರಗೆ || ೩ || ಶ್ರೀ ||

## ೫೦. ರಾಗ ಮಾಳವಿ, ಖಂಡಜಾತಿ ಝಂಪೆತಾಳ.

ವ್ಯರ್ಥವಾಗಿ ಜನ್ಮವೆತ್ತಿದೇ | ಈ | ಮಹಿಯೊಳು || ಪಲ್ಲ || ಪಾರ್ಥಸಾರಥಿ ನಾಮಕೀರ್ತನೆ ಗೈಯ್ಯದೆ | ಧೂರ್ತಜನರ ಸಂಗ ದೃಢವೆಂದು ತಿಳಿದು ನಾ || ಅಲ್ಲ || ನಿರತ ಚದುರಂಗನಾಡಿದೇ | ಧರ್ಮ | ವರರ ಕಥೆಗಳನ್ನು ಕೇಳದೇ || ಪರನಿಂದೆ ಪರದ್ರವ್ಯ ಪರದಾರರಲಿ ಮನ | ವೆರಸಿ ಶ್ರೀಕೃಷ್ಣನ ಭಜಿಸಾದೆ ದಿನಗಳನು || ೧ || ನಂದನಂದನ ಗೋವಿಂದನ | ಮುಚು | ಕುಂದವರದ ಮಾಕುಂದನ || ಕುಂದಕುಸುಮಗಳಿಂದ ಚಂದದಲಿ

ಪೂಜಿಸ | ದಿಂದು ಮಂದನಾವೆ || ೨ || ವರರತ್ನಗಿರಿ ಮುದ್ದು ರಂಗನಾ
ಕಿ | ನ್ನರವಂದ್ಯ ಗರುಡತುರಂಗನಾ || ಪರಮ ಭಕುತಿಯಿಂದ ಪಾಡಾದೆ
ಸಂಸಾರ | ಸ್ಥಿರವೆಂದು ತಿಳಿದು ಸುಗತಿಗೆ ಬಾಹಿರನಾಗಿ || ೩ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೯೧. ರಾಗ ಮೋಹನ, ಏಕತಾಳ.

ವೃಂದಾವನದೊಳು | ನಿಂದ ಸುಯತಿವರನ್ಯಾರೇ | ಪೇಳಮ್ಮಯ್ಯಾ ||
|| ಪಲ್ಲ || ಇಂದಿರೆಯರಸನ | ಚಂದದಿ ಭಜಿಸುವ | ಕುಂದುರಹಿತ ರಾಘ
ವೇಂದ್ರ ಕಾಣಮ್ಮ || ಅನುಪಲ್ಲ || ಮಂತ್ರಾಲಯಕೃತ | ಮಂದಿರನೆನಿಸುವ
ನ್ಯಾರೇ || ಪೇ || ತಂತ್ರದೀಪಿಕಮುಖ | ಗ್ರಂಥಕರೆನಿಸುವನ್ಯಾರೇ || ಪೇ ||
ಕಂತುಪಿತನ ಸ | ತ್ಪಂಥದಿ ಭಜಿಸುವನ್ಯಾರೇ || ಪೇ || ಚಿಂತಿತಫಲದ ದು
ರಂತಶಕ್ತಿ ಜಯ | ವಂತ ಈತ ಅಘ | ಶಾಂತ ಕಾಣಮ್ಮಾ || ೧ || ಶ್ರೀಸು
ಧೀಂದ್ರ ಕರಕಮಲಜನೆನಿಸುವನ್ಯಾರೇ || ಪೇ || ತಾಸ್ವಪ್ನದಿ ಮಂತ್ರಾಕ್ಷತೆ
ಕೊಡುತಿಹನ್ಯಾರೇ || ಪೇ || ಆಶುಗಮನಮತ ಸ್ಥಾಪಕನೆನಿಸುವನ್ಯಾರೇ ||
|| ಪೇ || ಭೂಸುರ ಜ್ಞಾನಿ ವಿ | ಶೇಷವಾಗಿ ಹರಿ | ದಾಸ್ಯವ ಪಡೆದ ಯ | ತೀಶ
ಕಾಣಮ್ಮಾ || ೨ || ಧಾರುಣಿಪತಿ ಜಲತೀರದಿ ನೆಲಸಿಹನ್ಯಾರೇ || ಪೇ ||
ಸಾರಿದ ಭಜಕರ ಭಾರಿಗೆ ಪೊರೆಯುವನ್ಯಾರೇ || ಪೇ || ಕಾರುಣ್ಯನಿಧಿ
ಅಪಾರಮಹಿಮನಿವನ್ಯಾರೇ || ಪೇ || ನಾರಾಯಣ ತಂದೆ ಶ್ರೀಪತಿವಿಠ
ಲನ | ಆರಾಧಿಪ ರಾಘವೇಂದ್ರ ಕಾಣಮ್ಮ || ೩ || ಶ್ರೀ ||

## ೯೨. ರಾಗ ಸೌರಾಷ್ಟ್ರ, ಝಂಪೆತಾಳ.

ಸಂಸಾರವನು ಮಾಡಿ ಸಕಲ ಜನಪೂ || ಪಲ್ಲ || ಕಂಸಾರಿ ಶ್ರೀಕೃಷ್ಣ ಕೈ
ಪಿಡಿದು ಸಲಹುವನು || ಅನುಪಲ್ಲ || ಬುದ್ಧಿಯೆಂದೆಂಬ ಕನ್ನಿಕೆಯ ಮದು
ವೆಯ ಮಾಡಿ | ಸದ್ಧರ್ಮವಭಿಮಾನದಿಂದ ಬೆಳಸೀ || ಶುದ್ಧಭಕ್ತಿಗ
ಳೆಂಬ ಮಕ್ಕಳನು ಪಡೆದು ಬಹು | ಅದ್ಭುತದ ಭವಾಬ್ಧಿಯನು
ದಾಟಿರಯ್ಯಾ || ೧ || ಚಾರು ಸುಜ್ಞಾನವೆಂಬುವ ಮುದ್ದು ಮಗನ್ಪಡೆದು |

ವೈರಾಗ್ಯವೆಂಬ ಭಾಗ್ಯವನೆ ಬೇಡೀ || ಸಾರ ಹರಿನಾಮಗಳ ರಸಪದಾರ್ಥಗಳುಣಿಸಿ | ಕಾರುಣ್ಯದಲಿ ಬೆಳಸಿರಯ್ಯ ಮಕ್ಕಳನೂ || ೨ || ಯಮ ನಿಯಮ ಅಷ್ಟಾಂಗಯೋಗ ಅಣಿಮಾದಿಗಳು | ಕ್ಷಮದಮಾದಿಗಳೆಂಬ ಬಂಧುಬಳಗಾ || ಮಮತೆ ಪೆರ್ಚಿಸಿಕೊಂಡು ಬೀಗತನ ಮೊದಲಾದ | ಅಮರಿಕೆಯ ಸಂಬಂಧವನೆ ಮಾಡಿರಯ್ಯಾ || ೩ || ಶೀಲ ಸನಕಾದಿಗಳು ಮುನಿದೇವತಾದಿಗಳು | ತಾಳಿ ತಮ್ಮೊಳಗೆ ಸಮವಿಷಯರಾಗೀ || ಆಲಂಪಟಗಳ್ಹಚ್ಚಿಕೊಂಡು ಭವನಿಧಿ ದಾಟಿ | ಸಾಲೋಕ್ಯ ಮೊದಲಾದ ಮುಕ್ತಿಗೈದಿದರೂ || ೪ || ಹೊರಗಿಷ್ಟ ಪದವಿ ಸತಿಸುತರು ಭಾಗ್ಯವೆ ನಿಮಗೆ | ಹರಿಯಿತ್ತ ಕಾಲಕ್ಕು ಹೃದಯದೊಳಗೇ || ಮರೆಯಲಾಗದು ಹಿಂದೆ ಸಂಸಾರದಾ ಬಾಧೆ | ದುರಿತಾರಿ ವ್ಯಾಸವಿಠ್ಠಲ ಬ್ಯಾಗ ವಲಿವಾ || ೫ ||

## ೯೩. ರಾಗ ಪೀಲು, ಏಕತಾಳ.

ಬೇಡುವದೂ ಬಲೂ ಕಷ್ಟಾ || ಪಲ್ಲ || ನೀಡದಿದ್ದವನೇ ನಷ್ಟಾ || ಅನುಪಲ್ಲ || ನಾಚಿಕೆಯೆಲ್ಲನು ತೊರದೂ | ಮಹಾ | ನೀಚರಿಗೆ ಬಾಯ್ತೆರದೂ || ೧ || ಕೊಟ್ಟಾರೆಂಬ ದುರಾಶಾ | ಕ್ರಿಯಾ | ಭ್ರಷ್ಟರರಿಯರೂ ಕ್ಲೇಶಾ || ೨ || ಚಿತ್ತವೃತ್ತಿಯನು ಕಂಡೂ | ಅಧಮರ | ಹೊತ್ತುಹೊತ್ತಿಗೆ ಕಾಣಿಸಿಕೊಂಡು || ೩ || ಗುಣಹೀನರ ಕೊಂಡಾಡೀ | ಬಂದು | ಕ್ಷಣಕ್ಷಣಕವರನು ನೋಡೀ || ೪ || ಶ್ರೀದವಿಠ್ಠಲನ ಬಿಟ್ಟೊ | ಅಧಮಾಧಮರಿಗೆ ದೈನ್ಯಬಟ್ಟೊ || ೫ || ಶ್ರೀಃ ||

## ೯೪. ರಾಗ ಮೋಹನ, ಝಂಪೆತಾಳ.

ನಮಿಸಿ ಬೇಡುವೆ ಗುರುವೆ ನಂದಿವಾಹನ ಚಲುವ | ನಯನ ನಾಗಭೂಷಣಾ || ಪಲ್ಲ || ಶ್ರಮಿಸಿ ಈಭವದೊಳಗೆ | ಶರ್ವ ಬಳಲಿದೆ ಯೆನಗೆ | ವಿಮಲಮತಿ ಕರುಣಿಸಯ್ಯಾ || ಜೀಯಾ || ಅನುಪಲ್ಲ || ಮನೋನಿಯಾಮಕನೆ ನಿ | ನ್ನನುಸರಿಸೆ ಸುರರೆಲ್ಲ | ಘನಮಾರ್ಗವನೆ ಪ್ರೇರಿಸೋ | ಯೆನ್ನಾ | ಬಿನಗುವಂಚಕವನ್ನೆ ಬಿಡಿಸೋ | ಹರಿಯ | ನೆನೆವ ಭಕ್ತಿಜ್ಞಾನವನೆ ಕೊಡಿಸೋ | ಪ್ರತಿಬಂಧ | ಗಣವೆಲ್ಲ ಪರಿಹರಿಸೋ | ಪಂಚಾಸ್ಯ |

ಮಣಿದು ಬೇಡುವೆ ನಿನ್ನ ವಿಷ್ಣುಪದ ತೋರಿಸುವ| ಪ್ರಣತಜನ ಪ್ರೀಯ ನೆಂದೂ || ಇಂದೂ || ೧ || ವಾಸವಾದ್ಯಖಿಳ ಸುರರಿಂದ ಸಲೆವಿನುತ ವಿ| ಲಾಸ ಗೌರೀಶ ಈಶಾ | ಸಲಹೆನ್ನ | ದೋಷವೆಣಿಸದಲೆ ನಿರ್ದೋಷಾ| ಶ್ರೀರಾಮ | ದಾಸದಾಸನೆ ತ್ರಿಜಗಪೋಷಾ | ಮಮಕಾರ | ದೋಷ ಕಳೆ ಶಾಂತ ಭೂಷಾ | ಕರುಣಾಳು | ನೀಸಮರ್ಥನು ಯೆಂದು | ನಿನಗುಸುರಿದೇ ಪಾಹಿ | ಶ್ರೀಶಪದಧ್ಯಾನ ನೀಡೋ | ದಯಮಾಡೋ || ೨ || ಗಂಗಾಧರ ಗಜಚರ್ಮಾಂಬರ ಭಸಿತ | ಶೃಂಗಾರ ಗಾನಲೋಲಾ | ಯೆನ್ನ | ಭಂಗ ಬಡಿಸುವುದುಚಿತವಲ್ಲಾ | ನಿನ್ನ | ಡಿಂಗರಿಗನೆನಿಸಿದ್ಯುಮೆಯ ನಲ್ಲಾ | ಹರಿ ದಾಸ | ಸಂಗದೊಳಗಿಡು ಯೆಂಬ ಸೊಲ್ಲಾ | ಧನ್ವಂತ್ರಿವಿಠ್ಠಲನ ಹೃದ | ಯಾಂಗಣದಿ ತೋರಿಸಯ್ಯಾ || ಜೀಯ || ೩ || ಶ್ರೀಃ ||

## ೯೫. ರಾಗ ಮುಖಾರಿ, ತ್ರಿಪುಟತಾಳ.

ಅಂಬೋದೆ ಖರೆಯೋ | ಹರಿಯ ನಾವು | ಅಂಬೋದೆ ಖರೆಯೋ || || ಪಲ್ಲ || ಇಂಬರಿತೆನ್ನ ಕಾಯ್ದರೆ ಸರಿಯಲ್ಲವೋ | ಕುಂಭಿನಿಯೊಳಗೆ ನಿ° ಮಾಡಿದ ಮಾಟಂಗ | ಳಂಬೋದೇ || ಅನುಪಲ್ಲ || ನಾರುಮಯ್ಯುವ ಭಾರ ಪೊತ್ತವ ಸೊಟ್ಟ | ಮೋರೆಯಾರ್ಭಟಿಸುತ ಚೀರುತಲೀ ಸಣ್ಣ || ಪೋರನಾದವನು || ಜನನಿಯ ಸಂ | ಹಾರಮಾಡಿದನೂ | ಕೋತಿಗಳಿಂದ ಅರಣ್ಯಚರನೂ | ಬೆಣ್ಣೆಯ ಕದ್ದು | ಜಾರನೆನಿಪನೂ || ಊರೆಲ್ಲ ನೋಡೆ ಬತ್ತಲೆ ನಿಂದು ಕುದುರೆಯ | ಹಾರಿಸ್ಯಾಡಿ ಬಲು | ಕ್ರೂರನಾದವನೆಂದು || ||೧|| ಯೆದೆಯಲೊದಿಸಿಕೊಂಡು | ಮುದದಿ ಪಾರ್ಥನ ರಥ | ಕುದುರೆಯ ಹೊಡದು ಬಾ | ಣದಿ ಹಣೆವಡಸಿಕೊಂ | ಡದರಿಂದ ತಾನೂ || ನಾಚೀ | ಮತ್ತೆ | ಕುದುರೆಮೋರೆಯನೂ | ಸೇರಿ | ತನ್ನ | ಪದದಿ ಬಲಿಯನೂ | ವದಗಿ ತುಳಿದು | ಸದನ ಬಾಗಿಲನೂ | ಹೆದರಿ ಕಾಯ್ವನೆಂದು | ಮುದ ಮುನಿಮತವ ಪೊಂ | ದಿದವರುಗಳ ಮುಂದೆ | ಮುದದಿಂದ ನಾನಿದ || || ೨ || ತನ್ನ ಪೆತ್ತವನ ತಮ್ಮಣ್ಣನ ಗುರುವಿನ | ಮುನ್ನ ಸ್ವಾಮಿಯ ಪ್ರಾಣವನ್ನು ತೆಗಿಸಿದವ | ರನ್ನು ಸಲಹಿದವನೂ || ಪೂತನಿ ಅಸು | ವನ್ನು ಹೀರಿದವನೂ | ಶಬರಿಯೆಂಜ | ಲನ್ನು ತಿಂದವನು | ಕುಬುಜೆಯ | ಳನ್ನು

ಕೂಡಿದನೂ | ಘನ್ನಾಭಿನ್ನವ ಜನಾರ್ದನ್ನವಿಠ್ಠಲನೆ | ಮನ್ನಿಸಿ ಪೊರೆ ಯದಿರಿನ್ನಿತು ಬಗೆಯನ್ನು || ೩ || ಶ್ರೀ॥ ||

॥ ಶ್ರೀಮಧ್ವೇಶಾರ್ಪಣಮಸ್ತು ॥

೯೬. ರಾಗ ಅಭೇರಿ, ಧ್ರುವತಾಳ.

ಶ್ರೀಮದಶ್ವಗ್ರೀವನೊಲುಮೆಗೆ | ಧಾಮರೆನಿಪ ಶ್ರೀವಾದಿರಾಜರು | ಪ್ರೇಮದಲಿ ಜಗನ್ನಾಥದಾಸರ | ಸ್ವಪ್ನದಲಿ ಬಂದೂ || ಶ್ರೀಮನೋರಮ ಸರಿಪ ತತ್ವಸು | ಸೌಮನದ ಮಾಲಿಕೆಯನಿತ್ತು | ದ್ವಾಮ ಗ್ರಂಥವ ರಚಿ ಸಿರೆನುತಲಿ ನುಡಿದ ಕಾರಣದೀ || ೧ || ಭಾರತ ಭಾಗವತ ವಾಮನ | ಗಾರುಡ ಭವಿಷ್ಯೋತ್ತರಪದವು | ಚಾರು ವಿಷ್ಣುರಹಸ್ಯ ಪಂಚರಾತ್ರಾ ಗಮ ವಾಯು || ಸಾರಗುರವೃತ್ತ್ರವೃತ್ತವು | ಈರಸಂಹಿತಾದಿತ್ಯವಾ ಗ್ನೇಯ | ಪಾರರಸಗಳ ತೋರ್ಪೆ ಶ್ರೀಗುರು | ಮಧ್ವಶಾಸ್ತ್ರದಲೀ || ೨ || ಭಾರಿಭಾರ್ಯವಲೋಕಿಸಿದರಲಿ | ಸಾರ ಕ್ರೋಡೀಕರಿಸಿ ದೀನೋ | ದ್ಧಾರ ಗೋಸುಗ ಹರಿಕಥಾಮೃತ | ಸಾರವನು ರಚಿಸೀ || ಸ್ಥೈರ್ಯಮಾನಸ ದಿಂದ ಭಾವಿ | ಭಾರತೀಪತಿ ವಾದಿರಾಜರ | ಭೂರಿ ತೋಷಕೊಪ್ಪಿಸು ತಲಾ | ಪಾರ ಮುದ ಪಡೆದೂ || ೩ || ಸಾಸಿರಾರ್ಥಗಳೊಂದುಪದಕವ | ಕಾಶವಿರುವೊ ಶ್ರೀದವಿಷ್ಣು | ಸಾಸಿರದ ನಾಮವನು ಯೋಚಿಸಿ | ಇಹರು ಗ್ರಂಥದಲೀ || ಈಸುರಹಸ್ಯವನರಿತು ಪಠಿಪಗೆ | ಯೇಸು ದೂರವೊ ಮುಕ್ತಿ ಬರಿದಾ | ಯಾಸಬಟ್ಟದರಿಂದ ಫಲವೇ | ನಿಲ್ಲವೀಜಗದೀ || ೪ || ಹಯೆನಲು ಹರಿ ವಲಿಯುವನು ತಾ | ರಿಯೆನಲುರಿಕ್ತತ್ವ ಹರಿಸುವ | ಕಯೆನಲು ಕತ್ತಲೆಯೆಂಬಜ್ಞಾ | ನವನು ಪರಿಹರಿಪಾ || ಥಾಯೆನಲು ಸ್ಥಾಪಿಸುವ ಜ್ಞಾನ | ಮೃಯೆನಲು ಮೃತಿಜನಿಯ ಬಿಡಿಸುವ | ತಯೆನಲು ಹರಿ ತನ್ನ ಮೂರ್ತಿಯ | ತೋರುವನು ನಿತ್ಯಾ || ೫ || ಸಾಯೆನಲು ಸಾಧಿ ಸುವ ಮುಕ್ತೀ | ರಯೆನಲು ರತಿಯಿತ್ತು ರಮಿಪನು | ಕಾಯವಾಙ್ಮನ ದೆಂಟು ಅಕ್ಕರ | ನುಡಿದರದರೊಳಗೇ || ಶ್ರೀಯರಸನ ವಿಶ್ವಾದಿ ಅಷ್ಟೈ | ಶ್ವರ್ಯರೂಪದಿ ನಿಂತು ತಾಪರ | ಕೀಯನೆನಿಸದೆ ಇವನ ಮನದೊಳು |

ರಾಜಿಪನು ಬಿಡದೇ ‖ ೬ ‖ ಹರಿಯೆನಿಪಗನಿರುದ್ಧ ಧರ್ಮವು | ದೊರಕಿಸುವ ಪರಮು ಹರುಷದಲಿ ಸ | ತ್ಪುರಕಥಾಯೆನೆ ಕೃತಿರಮಣನರ್ಥಿಗಳ | ಹನಿಗರೆವಾ ‖ ವರವ್ಯೃತಾಯೆನಲಾಗ ಶ್ರೀಸಂ | ಕರುಷಣನೆ ಕಾಮುವನೆ ಯೋಜಿಪ | ಸರಸಸಾರನೆ ವಾಸುದೇವನು | ಮೋಕ್ಷ ಕೊಡುತಿಪ್ಪಾ ‖ ೭ ‖ ಈರಹಸ್ಯವನರಿತು ಪ್ರತಿದಿನ | ಸಾರಸಾಕ್ಷನ ಪಾದಕಮಲಕೆ | ಆರುಪವನಂತಿರುವ ನರರಿಗೆ | ಮೇಲೆ ನುಡಿದ ಫಲಾ ‖ ಸಾರಿಸಾರಿಗೆ ವದಗಿ ಬರುತಲೆ ಸೇರಿಸುವರ್ಕ್ರ ವಿಷ್ಣುಮಂದಿರ | ತೋರುವನು ನಿಂದಕರ ನಿಕರಕೆ | ನಿರಯುವನು ನಿತ್ಯಾ ‖ ೮ ‖ ಚಾರುತರದೀ ಹರಿಕಥಾವ್ಯೃತ | ಸಾರಕೃತ ಋಷಿ ಭಾರದ್ವಾಜರ | ಸಾರ ಹೃದಯದಿ ನಿಂತ ಸಕಲ ಸು | ಶಾಸ್ತ್ರದಾಲೋಕಾ ‖ ಸಾರಿಸಾರಿಗೆ ಮಾಡಿಮಾಡಿಸಿ | ಸೂರೆಗೊಟ್ಟಾನಂದಚಿನ್ಮಯ | ಪಾರವಾರಾಶಯನ ಶ್ರೀಕಮ | ಲಾಪತಿವಿಠಲಾ ‖ ೯ ‖ ಶ್ರೀ ‖

## ೯೭. ರಾಗ ಮಧ್ಯಮಾವತಿ, ಅಟತಾಳ.

ಎಂದು ಕಾಂಬೆನೊ ನಿನ್ನಾ | ಯೇ ಶ್ರೀನಿವಾಸಾ ‖ ಪಲ್ಲ ‖ ನಗೆಮೊಗದ ನತಜನ | ಬಂಧು ಬಾ ಬಾರೆನ್ನ | ಬಿ | ಟ್ಟಗಲದಲೆ ಮನ | ಮಂದಿರದೊಳಿರು ಮುನ್ನಾ | ದರು ಸುಪ್ರಸನ್ನಾ ‖ ಮುಂದೆ ಗತಿಯೇನಯ್ಯ ಮುಕುತರ | ಹಿಂದುಳಿದವನಲ್ಲದಲೆ ತನುಸಂ | ಬಂಧಿಗಳ ವಶನಾಗಿ ದುರ್ವಿಷಯಾಂಧಕಾರದಿ ಮುಣುಗಿದವನಾ ‖ ಅನುಪಲ್ಲ ‖ ಹಲವು ಜನ್ಮದ ನೋವಾ | ನಾಹೇಳಿಕೊಳಲೇ | ನೆಲವೊ ದೇವರದೇವಾ ‖ ನೀನಲ್ಲದಲೆ ಭೂ | ವಲಯದೊಳಗಿನ್ನಾವಾ | ನಂಬಿದರ ಕಾವಾ ‖ ಸುಲಭರೊಳಗತಿ ಸುಲಭನೆಂಬುವ | ಅಲವಬೋಧಮತಾನುಗರು ಯೆನ | ಗೊಲಿದು ಪೇಳಲು ಕೇಳಿ ನಿಶ್ಚಂ | ಚಲದಿ ನಿನ್ನನೆ ಧೇನಿಸುವೆ ನಾ ‖ ಕಲುಷ ಸಂಸ್ಕಾರಗಳ ವಶದಿಂ | ಹೊಲಬುಗಾಣದೆ ಹರುಷಗುಂದುವೆ | ಹೊಲೆ ಮನದ ಹರಿದಾಟ ತಪ್ಪಿಸಿ | ನೆಲೆಗೆ ನಿಲ್ಲಿಸದಿರ್ದ ಬಳಿಕಿನ್ನೆಂದು ‖ ೧ ‖ ಭಾರತೀಶ ಪ್ರಿಯಾ | ಎಂದೆಂದು ಭಕತರ | ಭಾರ ನಿನ್ನದೊ ಜೀಯಾ | ಜಗವರಿಯೆ ಕರುಣಾ | ವಾರಿಧಿಯೆ ಪಿಡಿ ಕಯ್ಯಾ | ಫಣಿರಾಜ ಶಯ್ಯಾ ‖

ತಾರಕನು ನೀನೆಂದು ತಿಳಿಯದ | ಕಾರಣದಿ ಸುಖದುಃಖಮಯ ಸಂ | ಸಾರದುಸ್ತರ ಶರಧಿಯೊಳು ನಾ | ಪಾರಗಾಣದೆ ಪರಿದು ಪೋಪೆನೊ || ದೂರ ನೋಳ್ಪುದು ಧರ್ಮವಲ್ಲವೊ | ದ್ವಾರಕಾಪುರನಿಲಯ ಪರಮೋ | ದಾರತನುವೆಂದೆನ್ನ ಪಾಲಿಗೆ | ಬಾರದಲ್ಲದೆ ಭವವಿಮೋಚನ || ೨ || ವಿಖನಸಾರ್ಚಿತ ಪಾದಾ | ವಿಶ್ವೇಶ ಜನ್ಮಾ | ದ್ಯಖಿಳ ಕಾರಣನಾದಾ | ನಿರ್ದೋಷ ಸತ್ಯ | ಸುಖಗುಣಾರ್ಣವ ಶ್ರೀದ | ವಿಠ್ಠಲ ಪ್ರಸೀದ || ಸಕಲ ಕ್ರಿಯಯೋಗಗಳು ತನುಬಂ | ಧಕವು ನಿನಗೊಪ್ಪಿಸದಿರಲು ಯೆನೆ | ನಿಖಿಳ ಜೀವರ ಭಿನ್ನ ನಿನ್ನಯ | ಯುಕುತಿಗೇ ನಮೋ ಎಂಬೆನಲ್ಲದೆ || ಯುಕುತ ಯುಕ್ತಿಗಳೊಂದರಿಯದ | ರ್ಭಕನ ಬಿನ್ನಪ ಸಲಿಸಿ ನವ ವಿಧ | ಭಕುತಿ ಭಾಗ್ಯವ ಕೊಟ್ಟು ತವ ಸೇ | ವಕರ ಸೇವಕನೆನಿಸದಿರ್ದೊಡೆ || ೩ || ಶ್ರೀಃ ||

## ೯೮. ರಾಗ ಶ್ರೀರಂಜಿನಿ, ಆದಿತಾಳ.

ಕೊಳಲೂದೊ ಇನ್ನೊಮ್ಮೆ ರಂಗಯ್ಯಾ | ಕೊಳಲೂದೊ ಇನ್ನೊಮ್ಮೆ ಕೃಷ್ಣಯ್ಯಾ || ಪಲ್ಲ || ಕೊಳಲೂದೊ ದ್ವಾರಕಾಪುರನಿಲಯಾ || ಅನುಪಲ್ಲ || ಯೆಡಹೆಗಲಲ್ಲೆಡಗಲ್ಲವ ನೀಡೀ | ಕುಡಿಹುಬ್ಬುಗಳಲ್ಲಾಡೀ || ೧ || ಮೃದುತರ ತುಟಿ ಬೆರಳಿಂದೊತ್ತುತ | ಮಧುರಾಧರದಲ್ಲಿಟ್ಟು || ೨ || ಆದಿಮೂರುತಿ ಗೋಪೀಜನಲೋಲಾ | ಶ್ರೀದವಿಠಲ ಗೋಪಾಲಾ || ೩ || ಶ್ರೀಃ ||

## ೯೯. ರಾಗ ವಿಜಯಶ್ರೀ, ಆದಿತಾಳ.

ಮುಟ್ಟು ಬಾರೊ ರಂಗಯ್ಯಾ | .ಯೆನ್ನ || ಪಲ್ಲ || ಇಷ್ಟು ಇಷ್ಟು ಬೆಣ್ಣೆಮುದ್ದೆ | ಕೊಟ್ಟೆನು ರಂಗಯ್ಯ ಯೆನ್ನ || ಅನುಪಲ್ಲ || ಅಪ್ಪ ಬೊಮ್ಮನಪ್ಪ | ಬಾಯಿಜೊಲ್ಲು ಸುರಿಸು | ತಿಪ್ಪ ಕಾಲ್ಗೆಜ್ಜೆಯಿಂದ | ಚಪ್ಪಳಿಕ್ಕಿ ಯೆನ್ನ || ೧ || ಪುಟ್ಟಪುಟ್ಟ ಪಾದದಿಂದ | ಸೊಟ್ಟಸೊಟ್ಟ ಹೆಜ್ಜೆ ಹಿಂದ | ಕಿಟ್ಟುಧಿಟ್ಟ ಕೃಷ್ಣ ಯೆನ್ನ | ದೃಷ್ಟಿಯಿಂದ ನೋಡಿ ನೀ || ೨ || ಶ್ರೀಪತಿಗೆ ಗೋಪಿಯು ಬ | ಹೂಪರಿ ಅಲಂಕರಿಸಿ | ಭಾಪುರೆಯಿಂದಪೇಕ್ಷದಿ | ಈಪರಿಯೆಂದಳೂ || ೩ || ಲೇಶಕ್ಲೇಶ ತೋಷದಿಂದ | ಶ್ರೀಶ ಸರ್ವೇಶ

ನೇಮಾ | ನೀಸಕೊಸಲ್ಲವೊ ಮಂದ | ಹಾಸಾದಿ ನಗುತ ರಂಗ || ೪ || ಘನ್ನ ಅಭಿನವ ಜನಾ | ರ್ದನ್ನವಿಠಲನೆ ಯೆನ್ನ | ಪುಣ್ಯವೆಂತೊ ನಿನ್ನಂ ಘವ ಚಿಣ್ಣನಾದೀ ಯೆನ್ನ || ೫ || ಶ್ರೀ ೪ ||

## ೧೦೦. ರಾಗ ಮಧ್ಯಮಾವತಿ, ಅಟತಾಳ.

ವೆಂಕಟಾಚಲವಾಸಾ || ಪಲ್ಲ || ವೇದಾಂತವೇದ್ಯಾ | ತಂಕರಹಿತ ವಿಲಾ ಸಾ | ವಿಧಿಭವ ಸುರಾರ್ಚಿತ | ಪಂಕಜಾಂಘ್ರಿ ಸುಪೋಷಾ | ಲಕ್ಷ್ಮೀ ನಿವಾಸಾ || ಶಂಖಚಕ್ರ ವರಾಭಯಕರಶ | ಶಾಂಕವದನ ಕಳಂಕರಹಿ ತನೆ | ಕಿಂಕರನ ಅವಗುಣಗಳೆಣಿಸದೆ | ಪಂಕಜಜಪರಿಪಾಲಕನೆ ಶ್ರೀ || || ಅನುಪಲ್ಲ || ಶ್ರೀರಮಣ ಶೃಂಗಾರಾ | ಗುಣಗಣಭರಿತ ಭವ | ತಾರ ಕನೆ ತಾತ್ಕಾರಾ | ಮಾಡದಲೆ ತವ ಪರಿ | ಚಾರಕರ ವಿಸ್ತಾರಾ | ಸೇವೆ ಯನು ಪಾಲಿಸೊ | ವಾರವಾರಕೆ ಧೀರಾ | ದೇವಕಿ ಕುಮಾರಾ || ತಾರ ತಮ್ಯನುಸಾರ ತತ್ವವಿ | ಚಾರದಿಂದಲಿ ವಿವಿಧ ಮೋಹದಿ | ಪಾರಗಾ ಣಿಸೊ ಪಾರ್ಥಸಾರಥಿ | ಭಾರ ನಿನ್ನದೊ ಭಕ್ತವತ್ಸಲ || ಕೌರವಾಂತಕ ಕಾರುಣಿಕ ಪಂ | ಕೇರುಹೇಕ್ಷ ಪರಾವರಜ್ಞಾ ಮು | ರಾರಿ ಮುಕ್ತ ವಿಹಾರ ಮುನಿಪರಿ | ವಾರ ಮಾಮನೋಹಾರ ಮೂರುತಿ || ೧ || ತಾಟಕಾಂತಕರಾಮಾ | ತಡಮಾಡದಲೆಶಿಶಿ | ಜೂಟನುಳುಹಿದ ಪ್ರೇಮಾ | ಭವಸಾಗರದೊಳು | ಪಾಟಬಡುವೆನೊ ಕಾಮಾ | ಕ್ರೋಧಾ ದಿಗಳ ಆ | ರಾಟಮುಗ್ಗಿಸೊ ಸೋಮಾ | ಸತ್ಕುಲಲಲಾಮ || ಹಾಟಕಾಂಬರ ಹನುಮವಂದ್ಯವಿ | ರಾಟಮೂರುತಿ ವಿಷ್ಣು ತುರಿಯಲ | ಲಾಟಯೆಸವನ ಮನ್ನಿಸಿದ ಮಧು | ಕೈಟಭಾರಿ ಮಹಾಮಹಿಮ ಗುಣ || ಕೂಟದಿಂದಲಿ ಜಗವ ನಿರ್ಮಿಸಿ | ಹಾಟಕೋದರ ಹರಪ್ರಮುಖರ | ನೀಟುಸೂತ್ರದಿ ಈಟದಂದದಿ | ಚೂಟದಲಿ ಚಲ್ಲಾಟವಾಡಿದ || ೨ || ಜನನ ಮರಣ ವಿದೂರಾ | ಜಾನಕಿಮನೋಹರ | ಪ್ರಣತಜನ ಮಂದಾರಾ | ಪ್ರಾಕೃತ ರಹಿತ ಚಿ | ದ್ಘನಶರೀರ ಅಪಾರಾ | ಕರ್ಮಗಳಿಗೊಪ್ಪಿಸಿ | ದಣಿಸುವರೆ ಯದುವೀರಾ || ಪರತತ್ವಸಾರಾ || ವನಜಜಾಂಡವರೂಥಖಿಳ ಸ | ಜ್ಜನ

ಶಿರೋಮಣಿ ಸಾತ್ವತಾಂಪತಿ | ಮಣಿದು ಬೇಡುವರೊಡೆಯ ಮುದ್ ಹೃದ್ | ವನಜದಿನಮಣಿ ದಿತಿಸುತಾಂತಕ || ಜನುಮಜನ್ಮಾರ್ಜಿತ ಕಲುಷಕಾ | ನನವ ಖಂಡಿಸೊ ವ್ಯಾಸವಿಠ್ಠಲ | ಮನವಚನ ಕಾಯದಲಿ ನಮಿಸುವೆ | ಘನಮಹಿಮ ಗಜವರದ ಸುಂದರ || ೩ || ಶ್ರೀಶ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೧. ರಾಗ ದೇವಗಾಂಧಾರ, ಮಟ್ಟೆಛಾಪುತಾಳ.

ಇದನೆ ಬೇಡುವೆನಯ್ಯ | ವದಗಿ ಪಾಲಿಸು ಜೀಯ | ಬದಲು ನಾನೊಲ್ಲೆನು | ವಿದಿತವೇದ್ಯಾ || ಪಲ್ಲ || ಕ್ಷಣವೊಂದಗಲಿರಲಾರೆ | ನಿನ್ನವರನು ಬಿಡೆ | ಕುಣಿಕುಣಿವೆನು ನಿನ್ನವರಂದದಿ | ಗುಣತ್ರಯವಾರಣ ನಿನ್ನ ನಾರತೆಯಿಡೆ | ಒಣಹರಟೆಗಳನು ಕೇಳಲೊಲ್ಲೆ || ೧ || ನೀಚಜನರುಗಳ ಸಂಗವ ಕೊಡದಿರೊ | ವಾಚಾದಿಂದನ್ಯರಿಗಲ್ಪರಿಸಬ್ಯಾಡಾ | ಸೂಚಿಸೊ ನಿನ್ನಯ ಗುಣಗಣಗಳ ಸೇವೆ | ಯೋಚಿಸುವೆನು ಇದನೆ ಇದನೆ ಮುರಾರೀ || ೨ || ಶ್ರೀಶ ನಿನ್ನಯ ಕಥೆ ಕೇಳದೆ ಬಹುಕಾಲ | ಕಾಸು ಬಾಳದು ಕೇಳೊ ಕರುಣಾಬ್ಧಿಯೇ | ತಾಸು ಒಂದಾದರು ಅವನೆ ಸುಜೀವಿಯೋ | ವಾಸುದೇವಾವಿಠಲ ನಿನ್ನವರವನೂ || ೩ || ಶ್ರೀಶ ||

## ೧೦೨. ರಾಗ ಕರಹರಪ್ರಿಯ, ಆದಿತಾಳ.

ಪಾಲಿಸು ಬಾಲಗೋಪಾಲ ಕೃಪಾಲು ನೀ || ಪಲ್ಲ || ಪಾಲಿಸು ಬಾಲಗೋಪಾಲ ಬಾಲಕ ಲೀಲ ವಿ | ಶಾಲ ಮಾಲೋಲಜ ಲಾಲಿತ ಪಾಲಿಸೋ || ಅನುಪಲ್ಲ || ರಂಗುರನುಂಗುರದಂಗುಲಿಸಂಗದಿ | ಪೊಂಗೊಳ್ಳ ಸಂಗೀತ ರಂಗಾ | ಮಂಗಳಭಾಂಗ ತ್ರಿಭಂಗಾ ಗೋಜಂಗುಳಿ | ಸಂಗವು ಹಿಂಗದೆ ರಂಗಾ | ಅಂಗಜ ತಿಂಗಳ್ಪತಂಗರೂಪದಿ ಗೆಲ್ವ | ತುಂಗಜ್ವಯಾಗ ಶ್ರೀರಂಗಾ || ಮಂಗಳಪಾಂಗ ಶುಭಾಂಗ ವಿಹಂಗಗಾ | ಸಂಗೀಜಗಂಗಳ ರಂಗಾ || ೧ || ಕೆಂದಾವರಂದಾದಿ ಸುಂದರ ದ್ವಯಾಂಘ್ರಿ | ಚಂದುಳ್ಳ ತಂದೆ ಗೋವಿಂದಾ | ಬಂದಿ ಕಾಲಂದುಗೆ ಪೊಂದಲಿ

ಯಿಂದೊಪ್ಪೊ | ನಂದನಕಂದ ಗೋವಿಂದಾ || ಇಂದೀವರೀಂದು ವರೌಳೀಂದ್ರಾದಿವಂದಿತ | ನಂದಾನಕಂದಾ ಗೋವಿಂದಾ || ೨ || ಉನ್ನತ ಪುಣ್ಯ ಗೋಗನ್ಯರ ಮನ್ನಿಪ | ಚಿನ್ಮಯ ಚಿನ್ನ ಪಾವನ್ನಾ || ಪನ್ನಗ ಉನ್ಮತ್ಯಭಿನ್ನ ದಯಾರ್ಣಜ | ಗನ್ನ ಮೋಹನ್ನ ಪಾವನ್ನಾ || ಸನ್ಮುನಿ ಜನ್ನ ಭಾರ್ಯರ್ಣನ್ನವನುಣ್ಣುವ | ಚಿನ್ಮಯ ಚಿನ್ನ ಪಾವನ್ನಾ || ಸ್ವರ್ಣ ಗಿರೀ ನಿಕೇತನ್ನ ನಿಧನ್ಯಪ್ರ | ಸನ್ವೇಂಕಟರನ್ನ ಪಾವನ್ನಾ || ೩ ||

## ೧೦೩. ರಾಗ ನಾದನಾಮಕ್ರಿಯೆ, ಮಟ್ಟೆಪಕತಾಳ.

ಇಂದು ರಂಗಾನಟ್ಟೊಳಿಗೇ | ಇರಲಾರೆವಮ್ಮಾ ನಾವು | ಒಂದುಪಾಯವ ಕಾಣೆವೆ | ವನಿತೆ ಗೋಪ್ಯಮ್ಮಾ ಕೇಳೆ || ಪಲ್ಲ || ಹಿರಿಯರಾದವರಿಗೆ | ಭರದಿ ಪೇಳೇವೆಂದರೆ | ಸರಸಿಜಸಂಭವನಿಗೆ ಹಿರಿಯನೀತ ಕಾಣಮ್ಮ || ೧ || ಮಾಯಗಳ ಮಾಡೀ ನಾವೂ ಹೊಯಲೆಬ್ಬಿಸೆವೆಂದರೇ | ಮಾಯಾದೇವಿಗೆ ಸಿಗದೆ ಮಾಯಾವಾ ತೋರೂವನಮ್ಮ || ೨ || ಗುಮ್ಮನ ತೋರಿದಾರೀಗಾ | ಒಮ್ಮೊಮ್ಮೆ ಲೆಕ್ಕಿಸಾನಮ್ಮ | ಅಮ್ಮಮ್ಮ ಶ್ರೀನಾರಸಿಂಹ | ಅದ್ಭುತಾದ ದೈವ ಕಾಣಮ್ಮ || ೩ || ಅರವಿ ಸರ್ಪಾನ ಮಾಡೀ | ಭರದಿ ಅಂಜಿಸೇವೆಂದರೇ | ಖರಿಯಾವಾಗಿದ್ದ ದೊಡ್ಡಾ | ಉರಗಶಾಯಿ ಕಾಣಮ್ಮ || ೪ || ಅರಸಾರಿಗ್ಹೇಳೀದಾರು | ಬರಿದಾಗೂವದೆಂ ನಿಜ | ಧರೆ ಗಗನ ಪಾತಾಳದ | ಅರಸನಲ್ಲವೇನಮ್ಮ || ೫ || ಕಾಸುವೀಸಾ ಕಯ್ಯೊಳಿಟ್ಟೊ | ಕೂಸಿಗೆ ಬುದ್ಧಿ ಹೇಳೆವೆ | ಕೋಶ ಭಾಗ್ಯದಭಿಮಾನಿ | ಶ್ರೀಶನೇ ಈಶ ಕಾಣಮ್ಮಾ || ೬ || ಪಾಪಾದ ಭೀತಿತೋರದು | ಭೂಪರಂಗಾ ಅಂಜಾನಮ್ಮ | ಪಾಪರಹಿತರಾದವರ | ತಪಸಿಗಳೊಡೆಯಾನಮ್ಮ || ೭ || ಮ್ಯಾಣದ ಚೇಳು ತೋರುವೆ | ಜಾಣ ರಂಗಾ ಅಂಜಾನಮ್ಮ | ಮೇಣು ಮೂವತ್ತಾರುಲಕ್ಷ | ತಾಶಿಂಶುಮಾರಾನಮ್ಮ || ೮ || ಅನ್ನವಸನಗಳಿತ್ತು | ಮನ್ನಿಸೆವೆಂದಾರೆ ಪುಸಿ | ಕನ್ನೆ ದ್ರೌಪದಿ ದುಮ್ಮಾನ | ಮುನ್ನೆ ಇದಕೇ ಸಾಕ್ಷೀಯಲ್ಲೆ || ೯ || ಅಣ್ಣತಮ್ಮಾ ಬಂಧೂ ಬಳಗ | ಜನರುಂಟೇನೆ ಹೇಳೆವೆ | ಅನಾದಿ ಕಾಲದಲಿಂದಾ | ಘನ್ನ

ತಾನೇ ಯೇಕವೇವ ‖ ೧೦ ‖ ಚಿಣ್ಣಾ ನೀ ಅಣ್ಣಾ ಬಾಯೆಂದು | ಮನ್ನಿ ಸೆವೆಂದಾರೇ ಪುಸಿ ‖ ಅನಂತವೇದಗಳಿವನ | ಬಣ್ಣಿಸಿ ಹಿಂದಾಗಲಿಲ್ಲೆ ‖ ‖ ೧೧ ‖ ಊರುಕೇರೀಗಳಾ ಬಿಟ್ಟು | ದೂರ ಬಾರಾಹೋದೇವನೇ | ಸಾರವ್ಯಾಪ್ತಾನಾಗೀ ಇಪ್ಪಾ | ಯಾರಿಗೆ ದೂರೂವೇನಮ್ಮ ‖ ೧೨ ‖ ಕದ್ದು ಕದ್ದೋಡುವಾ ನಮ್ಮ | ಲಿದ್ದು ಪಿಡಿಯಾಲೊಶಾವಲ್ಲೆ ‖ ರುದ್ರರನ್ನಾ ಓಡಿಸಿದಾ | ಮುದ್ದುರಂಗಾನಿವಾನಮ್ಮಾ ‖ ೧೩ ‖ ಹಗ್ಗದೀ ಕಟ್ಟೇದಾರಾಗ | ಬಗ್ಗನಮ್ಮಾ ನಿನ್ನಾ ಮಗಾ ‖ ಆಗ್ಗಳೀಗೇ (ಆಗಳಿಗೆ) ಖಳರ ಉಕ್ಕ | ತಗ್ಗಿಸಿ ಬಂದಿಹಾನಮ್ಮ ‖ ೧೪ ‖ ಇಂದು ನಿನ್ನಾ ಕಂದಾನಾಟಾ | ಚಂದವೆಂದೂಬಂದೀಸುವೆವೆ ‖ ತಂದೆ ವ್ಯಾಸಾವಿಠ್ಠಲೆಮಗೆ | ಬಾಂಧವಾನಾದನು ಕಾಣೆ ‖ ೧೫ ‖ ಶ್ರೀ ‖

## ೧೦೪. ರಾಗ ಶಂಕರಾಭರಣ, ಆದಿತಾಳ.

ತಪ್ಪುಗಳೆಲ್ಲಾ ಪರಿಹರಿಸೋ ನಮಪ್ಪಾನಲ್ಲವೆ ನೀನು ‖ ಪಲ್ಲ ‖ ಒಪ್ಪಿದ ಬಳಿಕವಗುಣವೆಣಿಸದ ತಿಮ್ಮಪ್ಪನಲ್ಲವೆ ನೀನೂ ‖ ಅನುಪಲ್ಲ ‖ ಬೆಳಗಿನ ಝಾವದಿ ಹರಿ ನಿಮ್ಮ ಸ್ಮರಣೆಗೆ | ಅಳವಿಗೆಯಾಗೊಳ್ಳದ ತಪ್ಪು | ಮಲಮೂತ್ರವಿಸರ್ಜನೆ ಮೃತ್ತಿಕೆಯಿಂದಲಿ | ಮಲನ ತೊಳೆಯದ ತಪ್ಪು | ತುಳಸಿಬೃಂದಾವನ ಗೋಸೇವೆಗಳಿಗೆ | ಅಲಸವ ಮಾಡುವ ತಪ್ಪು | ನಳಿನಸಖೋದಯಗರ್ಘ್ಯವನೀಯದೆ | ಕಲಿವ್ಯಾಸಂಗವ ತಪ್ಪು ‖ ೧ ‖ ದಿನದಿನ ಉದಯದಿ ಸ್ನಾನವ ಮಾಡದೆ | ತನುವಂಚನೆಯ ತಪ್ಪು | ಮುನಿಸುರಭೂಸುರರಾರಾಧಿಸದ | ಧನವಂಚನೆಯ ತಪ್ಪು | ಕ್ಷಣಲವ ಹರಿಗುಣಜಿಜ್ಞಾಸಿಲ್ಲದೆ | ಮನವಂಚನೆಯ ತಪ್ಪು | ವನಜನಾಭ ನಿನ್ನ ಪಾದವಿಮುಖದು | ರ್ಜನರ ಸಂಗಗೈದ ತಪ್ಪು ‖ ೨ ‖ ಕಣ್ಣಿಲಿ ತ್ವರೆ ನಿನ್ನನು ನೋಡದೆ ಪರ | ಹೆಣ್ಣಿನ ನೋಡಿದ ತಪ್ಪು | ನಿನ್ನ ಕಥಾಮೃತವಿರಹಿತ ಹರಟೆಯ | ಮನ್ನಿಸುವಾಕಿವಿ ತಪ್ಪು | ಅನ್ನವ ನಿನಗರ್ಪಿಸದಜ್ಞಾನದಿ | ಉಣ್ಣುವ ನಾಲಿಗೆ ತಪ್ಪು | ಚಿನ್ಮಯ ನಿನ್ನಯ ಚರಣಕ್ಕೆರಗದೆ ಉನ್ಮತ್ತರ ನಮಿಸುವ ಶಿರ ತಪ್ಪು ‖ ೩ ‖ ಆನಂದದಿ ಹರಿಕೀರ್ತನೆ ಮಾಡದೆ | ಹೀನವಿವಾದದ ತಪ್ಪು | ಶ್ರೀನಾಥಾರ್ಚನೆಯಿಲ್ಲದೆ ಊಳಿಗ |

ವಾನಡಿಸುವ ಕರಗಳ ತಪ್ಪು | ಶ್ರೀನಿರ್ಮಾಲ್ಯ ವಿರಹಿತ ಸುರಭಿಯಾ | ಘ್ರಾಣಿಸುವಾ ನಾಸಿಕದ ತಪ್ಪು | ಶ್ರೀನಾರಾಯಣ ವೇಶ್ಯಾಗಮನೆಯ | ಆನಟನೇ ಪದ ತಪ್ಪು || ೪ || ಯಜ್ಞಾತ್ಮಗೆ ಯಜ್ಞಾರ್ಪಿಸದೇ ಕಾ | ಮಾಗ್ನಿಲಿ ಹೊರಳುವ ತಪ್ಪು | ಅಜ್ಞಾನಾಜ್ಞಾನದಿ ಲವಶತಗಳ | ವೆಗ್ಗಳಿಸುವ ಮನಸಿನ ತಪ್ಪು || ಆಗದ ಕರ್ಮವ ಆಚರಿಸುತಲೀ | ಸಮಸ್ತ ಗುಹ್ಯದ ತಪ್ಪು | ಯಜ್ಞೇಶ ಪ್ರಸನ್ವೇಂಕಟಕೃಷ್ಣ ನಾ | ಮಾಗ್ನಿಗೆ ತೃಣವೇ ತಪ್ಪು || ೫ || ಶ್ರೀ೪ ||

## ೧೦೫. ರಾಗ ವರಾಳಿ, ಆದಿತಾಳ.

ರಾಮನ ನೋಡಿರ್ಕ್ಕಿ | ರಘುಕುಲ ಸೋಮನ ಪಾಡಿರ್ಕ್ಕಿ || ಪಲ್ಲ || ಜೀಮೂತಶ್ಯಾಮಲ ಕಾಯಜನಕ ಜಾಮಾತಾ | ಸೀತಾಕಾಂತಾ || ಅನುಪಲ್ಲ || ಕೋಟಿದಿವಾಕರ ನಿಭಮಕುಟದ ಮಸ್ತಕದಾ | ಮುದ್ದಿನ ಮುಖದಾ | ನೀಟಹ ಫಣೆಯಲಿ ಮೃಗಮದ ಪುಂಡ್ರತಿಲಕದಾ | ನೀಲಾಳಕದಾ | ಮಾಟಕ ಮದನನ ಬಿಲ್ಲಹಳಿವ ಹುಬ್ಬುಗಳಾ | ವೃತ್ತಂಡಗಳಾ | ನೋಟದಿ ದಯರಸ ಸೂಸುವ ಕಮಲದಳಗಳಾ | ಸಮನಯನಗಳಾ || ೧ || ಯೆಸೆವ ಸುನಾಸಿಕ ಜ್ವಲಿತ ಕುಂಡಲಸ್ಮಿತ ವದನಾ | ಶಶಿಸಮರದನಾ | ಹೊಸುತಲಸೆಯ ಮಂಜರೆ ವನಮಾಲಾ ಧರನಾ | ಸತ್ಕಂಧರನಾ | ಮಿಸುಣಿಯ ವೈಜಯಂತಿ ತ್ರಿಸರವು ದಿವ್ಯಪದಕಗಳಾ | ಝುಳಝುಳಪುಗಳಾ || ಲಸತು ಶ್ರೀವತ್ಸ ವಕ್ಷದಿ ಕುಂಕುಮ ಚಂದನದಾ | ಗುಣಗಣಘನದಾ || ೨ || ಮರಕತಸ್ತಂಭಗಳಿಗೆ ಪೋಲ್ವೆಡಿಬಾಹುಗಳಾ | ಅಂಗದಯುಗಳಾ | ಕರವಲಯಾಂಗುಲಿ ಮುದ್ರಿಕೆ ಧೃತ ಕೋದಂಡಾ | ದಂಡಕದಂಡಾ | ಶಿರಿಜಠರ ತ್ರಿವಳೀ ಗಂಭೀರಾ ನಾಭಾ | ನಿರ್ಜರನಾಭಾ || ವರಪಿಂಗಳ ಕೌಶೇಯಾಂಬರ ಕಟಿಸೂತ್ರಾ | ಶ್ರೀಬ್ರಹ್ಮಸೂತ್ರಾ || ೩ || ಬಟ್ಟದೊಡೆ ಜಾನೂ ಘಟ್ಟಿದಂತೋಪಮಜಂಘಾ | ಸಂಹೃತಜಂಘಾ | ಕುಟಿಲನಿರಾಕ್ಷಸದಲ್ಲಣ ಪೆಂಡೆಯ ಚಲುವಾ | ಜನಿಜನಿಗೊಲಿವಾ | ಕಠಿನತರ ಪದತಳದೆಡೆಧ್ವಜಾಂಕುಶಾಂಬುಜ ಹೃತ್ಕಲುಷಾ || ನಿಟಿಲನಯನ ವಿಧಿಸುರ ಋಷಿವಂದಿತ

ಚರಣಾ | ನೂಪುರಭರಣಾ || ೪ || ಸುಖಮುನಿ ಮುಖಮುನಿ ಪೂಜಿತ ವಿಗ್ರಹವಾರಾ | ಪಾರವಿಹಾರಾ | ನಿಖಿಲಗುಣಾರ್ಣವ ನಿತ್ಯದಯಾರ್ಣವ ರಾಜಾ | ರಾಜಾಧಿರಾಜಾ || ಸಕಲ ಸಂಯಮಿಕುಲಮೌಳಿ ರತುನ ಸತ್ಯ ಪೂರ್ಣಾ | ಮನೋರಥಪೂರ್ಣಾ || ಪ್ರಕಟ ಪ್ರಸನ್ವೇಂಕಟಪತಿ ಶ್ರೀಭೂ ಲೋಲಾ | ಭುವನಕೆ ಮೂಲಾ || ೫ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೦೬. ರಾಗ ಬೇಹಾಗ್, ಆದಿತಾಳ.

ಶರಣರ ಸುರಭೂಜಾ | ಗುರುರಾಜಾ || ಪಲ್ಲ || ವರಮಂತ್ರಾಲಯಪುರ ಮಂದಿರ ಸುಂ | ದರ ಮುನೀಂದ್ರ ಭಾಸ್ಕರಸಮತೇಜ || ೧ || ಕಾಮಿತಾ ರ್ಥಗಳ | ಕಾಮಧೇನುವಿನ | ಸೀಮೆಮಿಾರಿಕೊಡುವ ಮಹರಾಜ || | ೨ || ಭೇಶಕೋಟಿ ಸಂಕಾಶನಾದ ಕಮ | ಲೇಶವಿಠ್ಠಲನ ದಾಸನೆ ಸಹಜ || ೩ || ಶ್ರೀ ||

## ೧೦೭. ರಾಗ ಪೂರ್ವಿ, ರೂಪಕತಾಳ.

ತಂಗಿ ರಂಗನ ಕರೆದು ತಾರೆ | ಮಂಗಳಾಂಗನಾ || ಪಲ್ಲ || ಗಂಗಾ ಪಿತನ | ತುಂಗಾಸಖನ | ಹಾಂಗೋ | ಹೀಂಗೋ | ಹ್ಯಾಂಗಾದರು ಬೇಗ || ೧ || ಮಾರಜನಕ ಮಮತೆಯಿಂದ | ಬಾರದಿರುವ ಬಗೆಯು ಕಂಡು | ಘೋರಿಸೂವ ವಾರಂ ವಾರ | ಕ್ರೂರಾ | ಮಾರಾ | ಶೂರಾ | ಧೀರ || ೧ || ನಾಗವೇಣಿ ಕೇಳೆ ನೀ | ನೀಗ ಪೇಳ್ವೆ ಅವನ ವೀ | ಯೋಗ ತಾಳಲಾರೆ ನೀಚ | ನ್ನಾಗೀ | ಬಾಗೀ | ಸಾಗೀ | ಪೋಗಿ || ೨ || ಸಾನು ರಾಗದಿಂದ ಪೇಳ್ವೆ |. ದೀನಬಂಧು ಅಭಿನವಾ | ಜನಾರ್ದನಾವಿಠ್ಠಲನೆ ಕಾಯ್ವ | ತಾನೇ | ಜಾಣೇ | ನೀನೇ | ಕಾಣೆ || ೩ || ಶ್ರೀ ||

## ೧೦೮. ರಾಗ ಯರಕಲಕಾಂಬೋಧಿ, ಆದಿತಾಳ.

ರಾಘವೇಂದ್ರಗುರುರಾಯರ ಸೇವಿಸಿರೋ | ಸೌಖ್ಯದಿ ಜೀವಿಸಿರೋ || || ಪಲ್ಲ || ಕುಂದದೆ ವರಮಂತ್ರಾಲಯದಲ್ಲಿರುವಾ | ಕರೆದಲ್ಲಿಗೆ ಬರುವಾ |

ಬೃಂದಾವನಗತ ಮೃತ್ತಿಗೆ ಜಲಪಾನಾ | ಮುಕ್ತಿಗೆ ಸೋಪಾನಾ | ಸಂದರ್ಶನ ಮಾತ್ರದಲಿ ಮಹತ್ಪಾಪಾ | ಕರಜೋಡಿಸಲಾಪ | ಮಂದ ಭಾಗ್ಯರಿಗೆ ದೊರೆಯದಿವರ ಸೇವಾ | ಶರಣರ ಸಂಜೀವಾ || ೧ || ಶ್ರೀಸು ಧೀಂದ್ರ ಕರಸರೋಜ ಸಂಜಾತ | ಜಗದೊಳಗೆ ಪುನೀತಾ | ದಾಶರಥಿಯು ದಾಸ್ಯವ ತಾನಭಿನಮಿಸೀ | ದುರ್ಮತಗಳ ಜೈಸೀ | ಈಸಮೀರಮತ ಸಂಸ್ಥಾಪಕನಾಗೀ | ನಿಂದಕರನು ನೀಗೀ || ಭೂಸುರರಿಗೆ ಸಂಸೇವ್ಯ ಸದಾ ಚರಣೀ | ಕಂಗೊಳಿಸುವ ಕರುಣೀ || ೨ || ಶ್ರೀವಿಠ್ಠಲನ ಸನ್ನಿಧಾನ ಪಾತ್ರ | ಸಂಸ್ತುತಿಸಲು ಮಾತ್ರ | ಮೋದಪಡಿಸುತಿಹ ತಾನಿಹಪರ ದಲ್ಲೀ | ಈತಗೆ ಸರಿಯಿಲ್ಲೀ | ಮೇದಿನಿಯೊಳಗಿನ್ನರಸಲು ನಾಕಾಣೆ | ಪುಸಿಯಲ್ಲವೆನ್ನಾಣೆ | ಪಾದಸ್ಮರಣೆಯ ಮಾಡದವನೆ ಪಾಪೀ | ನಾಪೇಳ್ವೆನು ಸ್ಥಾಪೀ || ೩ || ಶ್ರೀ ||

೧೦೯. ರಾಗ ಕಾಂಬೋಧಿ, ಝಂಪೆತಾಳ.

ಮರೆಯದಿರು ಮರೆಯದಿರು ಮಾರಮಣನೇ || ಪಲ್ಲ || ಗುರು ಸತ್ಯ ಬೋಧಾರ್ಯವರದ ರಘುರಾಮಾ || ಅನುಪಲ್ಲ || ವನವನಂಗಳ ತಿರುಗಿ | ಹಣ್ಣುಹಂಪಲ ಮೆದ್ದು | ದಣುವಾದ ಪಾಡು ನಿನಗರಿಕಿಲ್ಲವೇ || ದಿನ ದಿನದಿ ಚಿತ್ರವಿಚಿತ್ರ ಭೋಜ್ಯಗಳನ್ನು | ಕ್ಷಣಬಿಡದೆ ಕೈಕೊಂಬ | ಘನ ಗರ್ವದಿಂದೆನ್ನ || ೧ || ನಾರವಸ್ತ್ರವನುಟ್ಟು | ತಲೆಜಡೇಗಟ್ಟಿದುದು | ತೋರದೇನೋ ನಿನ್ನ ಮನಸಿಗಿಂದೂ || ಮೇರೆಯಿಲ್ಲದ ಪದಕ | ವಜ್ರ ಮಣಿಮಕುಟಗಳ | ಭಾರವನು ನೀವಹಿಸಿ | ಬಹುಬಿಂಕವನೆ ತಾಳಿ || ೨ || ಅರ್ಭಕನ ತೆರದಂತೆ | ದರ್ಭೆಹಾಸಿಗೆ ಮೇಲೆ | ಗುಬ್ಬಿಯಂದದಿ ಮಲಗಿದುದು ಮರತೆಯಾ || ಲಭ್ಯವಾದಾ ಹೇಮತೊಟ್ಟಿಲೊಳು ನೀಮಲಗಿ | ಉಬ್ಬಿ ಓಲಗಗೊಂಬ ಉತ್ಸಾಹದಿಂದೆನ್ನ || ೩ || ಹೆಂಡತಿಯ ಕಳಕೊಂಡು | ಕಂಡಕಂಡವರಿಗೇ | ಅಂಡಲಿದ ಮಾತುಗಳು ಅನಲೇತಕೇ || ಮಂಡಿತಾದಾಭರಣ | ಮತ್ತೆ ಯೆಡದಲಿ ಸತಿಯು | ಕಂಡು ಸುಖಬಡುವಂಥ | ಕೆಳವಳಿಕೆಯಿಂದೆನ್ನ || ೪ || ಈಗಲೀಸತ್ಯಬೋಧರ ಬಳಿಯಲಿರಲಾಗಿ | ನೀಗಿಹೋಯಿತೆ ನಿನ್ನ ಪಡಿಪಾಟಲೂ || ಆಗೀಗ

ಲೆನ್ನದೇ | ಕ್ಷಣಬಿಡದೆ ಕೈಕೊಂಡು | ವೈಭೋಗಬಡುವದೂ | ವೊದ ಲಿಗಿದ್ದಿಲ್ಲ || ೫ || ನಮ್ಮ ಗುರುಗಳು ನಿಮಗೆ | ಈಪರೀಯುಪಚಾರ | ಘಮ್ಮನೇ ಮಾಡಲೂ ಘನತೆಯಿಂದಾ || ನಮ್ಮ ಸಾಕದೆ ಇನಿತು | ದೂರ ಮಾಳ್ಪುದು ನಿನಗೆ | ಧರ್ಮವಲ್ಲವೊ ಸ್ವಾಮಿ | ದಯದಿಂದ ನೋಡೆಮ್ಮ || || ೬ || ಸಾಕಾರರೂಪ ಸರ್ವೋತ್ತಮನೆ ವೈಕುಂಠ | ಬೇಕಾಗಲಿಲ್ಲ ಹೊಸಪರಿ ಭಾಗ್ಯವೂ || ಯಾಕೆ ಭಕತರಮಾತು ನಿ | ರಾಕರಿಸಿಬಿಡು ವುದೂ | ಶ್ರೀಕಾಂತ ಯೆರಗುವೆ | ವ್ಯಾಸವಿಠ್ಠಲರೇಯ || ೭ || ಶ್ರೀ ||

## ೧೧೦. ರಾಗ ಶ್ರೀರಂಜಿನಿ, ಅಟತಾಳ.

ಬೇಗ ನಮಿಸುವೆ ಈಗ ಮಧುರಿಗೆ | ಪೋಗಿ ಬೇಗನೆ ಬಾರೆಲಾ || ಪಲ್ಲ || ಲಕ್ಷ್ಮೀ ನಿನ್ನಯ ವಕ್ಷದಲ್ಲಿರೆ | ಲಕ್ಷಯಿಲ್ಲವೊ ನಿನಗೆಲಾ || ಈಕ್ಷಿಸಿ ಭಕ್ತರನಪೇಕ್ಷಿಸಿ | ಉಪೇಕ್ಷಿಸದೆ ನೀ ಪೊರೆಯೆಲಾ || ೧ || ಸಾರಸನ್ನುತ ಭರಿತ ನಿನ್ನಯ ಸುರತ ನಮಗಿನ್ನಿಲ್ಲೆಲಾ || ನಿರುತದಿಂದಾ ನಿನ್ನ ಜಿರೆ ವೆವು | ಸುರತಸುಖ ನಮಗೀಯೆಲಾ || ೨ || ನವಸುಮೋಹನ ನವಯು ವರಿಗಾ | ಯುವತಿಯರು ನಿನ ಬಿಡರೆಲಾ || ತವಕದಿಂದಾ ಬರುವ ಹವ ಣಕೆ ಅಭಿ | ನವಜನಾರ್ದನವಿಠ್ಠಲ || ೩ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೧೧. ರಾಗ ಕುಂತಲವರಾಳಿ, ಆದಿತಾಳ.

ಎಂತು ವರ್ಣಿಸಲಮ್ಮ ನಾನೂ | ಶ್ರೀಕಾಂತನ ಮಹಿಮೆಯ || ಪಲ್ಲ || ನೀರೊಳಾಡುವ ಭಾರವ ಹೊರುವ | ಧಾರುಣಿಯನೆತ್ತಿ ಘೋರರೂಪದಿ ಮಾಯದಿ ಬೆಳೆವಾ | ಕ್ರೂರನೃಪರಳಿವ ಆರಾವಣನ್ನ ಬಲವ ತರಿವ || ಚೋರ ದಿಗಂಬರ ಚಾರು ಕುದುರೆಯನೇರಿ | ವೀರಕಾಲಿಯ ಬಲಿ ಮೂರುಜಗದೊಳು | ಶೂರನಾರುವ ಕಠಿನದಿ ವನವನಘ | ಸೇರುವ ಸ್ತಂಭ ವಿದಾರಣ ಮಾಡುವ | ಮಿರುವ ಗಗನಕೆ ತೋರುವ ಪರಶುವ | ವಾರಿಧಿ ಪೋಷಕ ಜಾರಸುವಸ್ತ್ರವಿ | ದೂರ ಘನಾಶ್ವವನೇರುವ ಧೀರನಾ || ೧ ||

ಸಿಗವು ಉದ್ಧರಿಸೀ ನಗವನು ಪೊರೆವಾ | ಜಗತಿಯನುದ್ಧರಿಸುವ ಮಗುವ ಪಾಲಿಸುವ | ಕಾಯದಿ ಬೆಳೆವಾ ದುಗಡಾ ನೃಪಕುಲವ | ಬಗಿದು ಭಾಸ್ಕರನ ತನಯಗೊಲಿವಾ || ನೆಗಹಿ ಗೋವರ್ಧನ ಬಗೆಬಗೆ ಮಾತಿನಿಂದ | ಸುಗುಣ ಹಯವನೇರಿ ಬಂದಾ || ಸಚ್ಚಿದಾನಂದಾ || ಹುಗಿದು ಸೋಮಕನ್ನದ್ರಿಗೆ ಬೆನ್ನಾತನ | ತೆಗದು ಭೂಮಿಯ ಕಂಭದಲಿ ಬಂದವನಾ | ಗಗನಕೆ ಬೆಳದು ಘಾಸಿಸಿ ಕ್ಷತ್ರಿಯರನಾ | ರಘುವರ ಯದು ಪತಿ ಗತವಸನನಾಗಿ | ಜಗಕೆ ಬಲ್ಲಿದ ವಾಜಿಯನೇರಿದ ಧೀರನಾ || ೨ || ಪದುಮನಾಭ ಪದುಮೇಶ ಪದುಮಮಾಲ ಪದುಮಾಕ್ಷ | ಪದುಮ ಶರನ ಪಡದ ಪದುಮಪಾಣಿ | ಪದುಮಾಂಘ್ರಿ ಪದುಮಸಖ ಸುತೇಜ || ಪದುಮಕಲ್ಪದಿನಭ | ಪದುಮಾದಿ ಚತುರ್ಮುಖ | ಪದುಮಜನ ಪಡದೇ | ಪದುಮಜಾಂಡವಾಳಿದೆ | ಪದುಮಪೀಠನ ಹೃತ್ಪದುಮಾದಿ ನಿನ ಪಾದ | ಪದುಮವ ತೋರುತ ಪದುಮಸರವಿಹಾರ | ಶ್ರೀನಿವಾಸವಿಠ್ಠಲ ಪದು ಮಾವತಿ ಸಹಿತ ಪರಿಪರಿ ಸುಖಿಸುತ || ೩ || ಶ್ರೀ೬ ||

## ೧೧೨. ರಾಗ ಲಾವಣಿ ನವರೋಜು, ಆದಿತಾಳ.

ದಾರ್ಯ್ಯಾ ದೂರ ನಿಲ್ಲು ದಾರಿಕಟ್ಟಿ ಬರದಿರು | ಯಾರಿಗಾಗಿ ಮಾರ ಬಂದೆ ಹಾಲ್ಮೊಸರಾ || ಹೇಳ್ ನಿನ್ನ ಹೆಸರಾ || ದಾರ್ದೂರಲ್ಲ ಕೋಲ್ಕಾರ ಕೃಷ್ಣ ಕೇಳು ಬಾಲೆ | ದಾರಿಯೋಳ್ ಸುಂಕಶೋಧಗ ಳುಂಟೊ | ಇದು ಯೇನ್ ಗಂಟೊ || ೧ || ಗಂಡನುಳ್ಳ ಬಾಲೆಯರ ಮುಂಡುಕುಚ ಮುಟ್ಟಲಿಕ್ಕೆ | ಪುಂಡುತನ ಬುದ್ಧಿಯಿದು ಥರವೇನೇ || ಜೀವಯೆರವೇನೋ || ಪುಂಡುತನ ಬುದ್ಧಿಯಿದು ಥರವೇನೆಂದರೆ | ಹೆಂಡ ತೆಂತ ಮುಟ್ಟಿದಾಗ ಕುಚಯುಗವಾ | ಕಾಣದೆ ನಗುವಾ || ೨ || ಯಾಕೆ ಮಾತಾಡುತಿದ್ದಿ ಕಾಕುಮಾತಾಡುತಿದ್ದಿ | ಸಾಕು ನಿನ್ನ ಮಾತಿಗಾ ಸಲು ಗೇನೋ || ನಿನ್ನ ನಗೆಯೇನೋ || ಸಾಕು ನಿನ್ನ ಮಾತಿಗಾ ಸಲುಗೇನೆಂ ದರೆ | ಬೇಕು ಬೇಡಿದ್ದು ನಾಕೊಡುತೇನೆ || ನಿನ್ನಿಡುತೇನೇ || ೩ || ಕೊಂಡು ಕೊಂಡು ನಡಿಸಲಿಕ್ಕೆ ಶೆಟ್ಟಿಗಾರ ನಾನಲ್ಲ | ನೀನಿಟ್ಟುಕೊಂಡ ಸೂಳೆ ನಾನಲ್ಲ ಹೋಗೋ || ನೀನಲ್ಲ ಸಾಗೋ || ಇಟ್ಟುಕೊಂಡ ಸೂಳೆ ನಾನಲ್ಲ

ಹೋಗೆಂದರೆ | ಕಟ್ಟಿಕೊಂಡು ಹೋದೆನು ವಳತನಕಾ | ಬೆಳಬೆಳತನಕಾ ||
|| ೪ || ವಳತನಕ್ಯಾತಕೆ | ಬೆಳತನಕ್ಯಾತಕೆ | ತಿಳಿಯಲಿಲ್ಲಾ ವೂತಿನ ಬೆಡಗಾ | ಅಹುದೆಲೊ ಹುಡುಗಾ || ತಿಳಿಯದಿದ್ದರೆ ನಾ | ತಿಳಿಹೇಳಿಕೊಡುವೆನೆಂದು | ಸೆಳದಪ್ಪಿಕೊಂಡ ಶ್ರೀದವಿಠ್ಠಲ್ಲ | ಬಹುಬಹು ಧಿಟಲಾ || ೫ ||

## ೧೧೩. ರಾಗ ವೋಹನ, ಝಂಪೆತಾಳ.

ಎಲ್ಲಿ ಮಧುರಾಪುರಾ | ಎಲ್ಲಿ ತಾ ಬಿಲ್ಲಹಬ್ಬ | ಎಲ್ಲಿ ಸೋದರಮಾವನೇ ||
ಎಲ್ಲಿ ಮಲ್ಲರ ಸಂಗ | ಆಕಂಸನೂ ನಮಗಿ | ನ್ನಾವ ಜನುಮದ ವೈರಿಯೇ | ಸಖಿಯೇ || ಪಲ್ಲ || ವೃಂದಾವನದೊಳಗೆ | ವೃಕ್ಷಜಾತಿಗಳೆಲ್ಲ | ಒಂದೊಂದು ಫಲತುಟಿತವೇ || ಕುಂದಸುಮಮಾಲತೀ | ಮಂದಾರ ಚಕೋರ | ರೊಂದಾಗಿ ರಸಭರಿತವೇ || ಬಿಂದು ಮಾಧವ ನಿಮ್ಮ | ಹೊಂದಿ ಪಾದವ ಸಕಲ | ನಂದಕಂದನ ಚರಿತವೇ | ಸಖಿಯೇ || ೧ || ಅಕ್ರೂರ ಯೆಂಬಾತ | ಅಚ್ಯುತಗೆ ನಡೆಮಾಡೆ | ತಾ ಕ್ರೂರನೆನಿಸಿದಾನೇ || ವಕ್ರಮಾರ್ಗದಿ ಹುಟ್ಟಿ | ವನಿತೆಯರುಸೂರೆನಿಸಿ | ಚಕ್ರಧರನಗಲಿಸಿದನೇ || ಆಕ್ರಮಿಸಿ ಸುರಲೋಕಪಾರಿಜಾತವ ತಂದು | ಅಂಬುಜಾಕ್ಷಿಗೆ ಇತ್ತನೇ | ಸಖಿಯೇ || ೨ || ನೀರಚಲ್ಲಾಟದಲಿ | ನಿಲಿಸಿ ನಮ್ಮೆಲ್ಲರನು | ನಲಿನಲಿದು ಚಿಮ್ಮುತಿಹನೇ || ಮೋರೆಮೋರೆಯ ನೋಡಿ | ಮುದ್ದಿನಧರಾಮೃತವ | ಭಾರಿ ಸವಿದುಂಬನೇನೇ || ದ್ವಾರಕಾಪುರವಾಸ | ಜಯವ್ಯಾಸವಿಠ್ಠಲನು | ಸೇರಿ ನಮ್ಮನು ಸಲಹನೇ | ಸಖಿಯೇ || ೩ || ಶ್ರೀಃ ||

## ೧೧೪. ರಾಗ ಭೈರವಿ, ಝಂಪೆತಾಳ.

ವ್ಯಾಸಮುನಿರಾಯರಾ ದಾಸರೊಳು ಪುರಂದರಾ | ದಾಸರಾ ಮಹಿಮೆ ವರ್ಣಿಸಲಾರೆನವ್ವಾ || ಪಲ್ಲ || ಮೂರುಲೋಕದರಸು ಮಾಭೂದುರ್ಗೆಯು ಸಹಿತ | ಧಾರುಣಿಯ ಮ್ಯಾಲೆ ದಯಮಾಡಿ ಬಂದೂ || ನಾರದರು ಇವರೆಂದು ಪುರಂದರಾದಾಸರಿಗೆ | ಕಾರುಣ್ಯದಿಂದ ಕಾಣಿಸಿಕೊಂಡರವ್ವಾ || || ೧ || ಗಂಗೆ ಗೌತಮಿ ಯಮುನೆ ತುಂಗಭದ್ರೆ ಮೊದಲಾಗಿ | ಶೃಂಗಾರದಿಂದ ನಮ್ಮಂಗಳಾದೊಳಗೇ || ಮಂಗಳವ ಪಾಡುತ್ತ ರಂಗವಲ್ಲಿಕ್ಕುತಾ |

ಕಂಗಳಿಂದಲಿ ಕಂಡೆ ತಂಗಿ ನೋಡವ್ವಾ || ೨ || ಹರಿದಾಸದಾಸರಾ ಉದರದಲಿ ಪುಟ್ಟಿನ್ನು | ಗುರುವ್ಯಾಸರಾಯರಾ ಚರಣಗಳ ಕಂಡೆ ನಾ | ಪರಮ ಸಾರ್ಥಕವಾಯಿತೀದೇಹ ಗುರುಪುರಂ | ದರವಿಠ್ಠಲನ ನಾ ಅರಿತೆಯಿವರಿಂದಾ || ೩ || ಶ್ರೀ ||

ററ൫. ರಾಗ ಬೇಹಾಗ್, ಆದಿತಾಳ.

ಕಂಡು ಧನ್ಯನಾದೆ ಗುರುಗಳ | ಕಣ್ಣಾರೆ ನಾ || ಪಲ್ಲ || ಕಂಡು ಧನ್ಯನಾದೆ ನಾ ನಮ್ಮ ಗುರುಗಳಾ || ಅನುಪಲ್ಲ || ತುಂಗಾತಟದಿ ನಿಂದು ಬಂದ | ಪಂಗು ಬಧಿರಾದ್ಯಂಗಹೀನರ | ಅಂಗಗೈಸಿ ಮೆರೆಯುವ ನರ | ಸಿಂಗನಂಘ್ರಿ ಭಜಕರಿವರ || ೧ || ಗುರುವರ ಸುಗುಣೇಂದ್ರರಿಂದ | ಪರಿಪರಿಯಲಿ ಸೇವೆಗೊಳುತ | ವರಮಂತ್ರಾಲಯಪುರದಿ ಮೆರೆವ | ಪರಿಮಳಾಖ್ಯ ಗ್ರಂಥಕರ್ತರಾ || ಸೋಹಮ್ಮೆನ್ನದೆ ಹರಿಯ ದಾ | ಸೋಹಮ್ಮೆನ್ನಲು ವಲಿದು ವಿಜಯ | ಮೋಹನವಿಠಲನ್ನ ಪರಮ | ಸ್ನೇಹದಿಂದ ತೋರುವವರ || ೩ || ಶ್ರೀ ||

|| ಶ್ರೀಮಧ್ವೇಶಾರ್ಪಣಮಸ್ತು ||

ററ൬. ರಾಗ ಸುರುಟಿ, ಆದಿತಾಳ.

ಭಾಗವತಜನರಿಗೆ ಬಾಗಿ ನಮಿಸದಗೆ | ಹ್ಯಾಗೆ ಶ್ರೀಹರಿ ದಯಮಾಡ್ಯಾನೋ || ಪಲ್ಲ || ಯೋಗ್ಯವರೋದಿತ | ಭಾಗವತ ಪ್ರಿಯ | ಭಾಗವತವ ಅನುರಾಗದಿ ಕೇಳದ || ೧ || ಶಕ್ತಿಮೀರಿ ಹರಿಭಕ್ತಿಯಿಲ್ಲದೆ ಕು | ಯುಕ್ತಿತನದ ಉನ್ಮತ್ತಜನರಿಗೆ || ೨ || ದಾಸರದಾಸನೆಂದೀಶಗೆ ಮೊರೆಯಿಡೆ | ಲೇಸುಕೊಡುವ ತಂದೆ ವಾಸುದೇವವಿಠಲ || ೩ || ಶ್ರೀ ||

ററ൭. ರಾಗ ಮೋಹನ, ಆದಿತಾಳ.

ತುಂಗಾತೀರದಿ ನಿಂದ ಸುಯತಿವರನ್ಯಾರೇ | ಪೇಳಮ್ಮಯ್ಯ || ಪಲ್ಲ || ಸಂಗೀತಪ್ರಿಯ ಮಂಗಳ ಸುಗುಣತ | ರಂಗ ಮುನಿಕುಲೋತ್ತುಂಗ ಕಾಣಮ್ಮ || ಅನುಪಲ್ಲ || ಸುಂದರ ಚರಣಾರವಿಂದ ಸುಭಕುತಿಯಲಿಂದಾ ||

|| ಪೇ || ವಂದಿಸಿ ಸ್ತುತಿಸಲು ವೃಂದಭೂಸುರರಿಂದಾ || ಪೇ || ಚಂದವದ ಲಂಕೃತದಿಂದೆ ಶೋಭಿಪಾನಂದಾ || ಪೇ || ಹಿಂದೆ ವ್ಯಾಸಮುನಿಯೆಂದೆನಿಸಿದ | ಕರ್ಮಂದಿಗಳರಸಘದಿಂದ ರಹಿತನೇ || ೧ || ಚಲುವ ಸುಮುಖ ಪಣೆಯಲ್ಲಿ ತಿಲಕನಾಮುಗಳೂ || ಪೇ || ಜಲಜಮಣಿಯು ಕೊರಳಲ್ಲಿ ತುಲಸಿಮಾಲೆಗಳೂ || ಪೇ || ಸುಲಲಿತ ದಂಡಕಮಂಡಲ ಧರಿಸಿಹನ್ಯಾರೇ || ಪೇ || ಖೂಳಹಿರಣ್ಯಕನಲ್ಲಿ ಜನಿಸಿದಾ | ಪ್ರಹ್ಲಾದನು ತಾನಿಲ್ಲಿಹನಮ್ಮಾ || ೨ || ಅಭಿನವ ಜನಾರ್ದನವಿಠ್ಠಲನ ಪದ ಧ್ಯಾನಿಸುವಾ || ಪೇ || ಅಭಿವಂದಿಪರಿಗೆ ಅಖಿಳಾರ್ಥಗಳ ತಾ ಕೊಡುವಾ || ಪೇ || ನಭಮಣಿಯಂದದಿ ವಿಭವದಿ ಬಹುರಾಜಿಸುವಾ || ಪೇ || ಶುಭಗುಣನಿಧಿ ಶ್ರೀರಾಘವೇಂದ್ರಗುರು | ಅಬುಜಭವಾಂಡದಿ ಪ್ರಬಲ ಕಾಣಮ್ಮ || ೩ ||

## ೧೧೮. ರಾಗ ಸಾರಂಗ, ಝಂಪೆತಾಳ.

ಹ್ಯಾಗಾಗುವದೊ ನಿನ್ನ ದಯವೆನ್ನೊಳೂ || ಪಲ್ಲ || ಕಾಗೆಗೂಗೆಗಳಂತೆ ಬದುಕಿದೊಡೆ ವ್ಯರ್ಥದೊಳು || ಅನುಪಲ್ಲ || ನಿದ್ರೆಗೊಳಗಾಗದಲೆ ಅರ್ಧರಾತ್ರಿಯೊಳೆದ್ದು | ಶುದ್ಧಮತಿಯಲಿ ನಿನ್ನ ಮುದ್ದು ನಾಮಾ | ಯೆದ್ದು ನೆನೆಯುವ ಜನರ ಗದ್ದಲವ ಸಹಿಸದಲೆ | ನಿದ್ರೆಬಾರದು ಯೆಂದು ಯೆದ್ದೆದ್ದು ನೋಡುವಗೆ || ೧ || ನರಸಿಂಹ ಹರಿಕೃಷ್ಣ ದುರಿತಸಂಹಾರ ಶಿರಿ | ಮರುತನೊಡೆಯನೆ ನಿನ್ನ ಸ್ಮರಣೆಮಾತ್ರಾ || ದುರಿತಕಶ್ಮಲವನ್ನ ವರಹಕೇಸರದಂತೆ | ಪರಿಹರಿಸುವಾದೆಂಬ ಅರಿಯದತಿ ಮೂಢನಿಗೆ || ೨ || ಹಗಲಿರುಳು ಬಿಡದೆ ನಗೆಮೊಗದ ನಾರಿಯರ ಪ್ರೈ | ಬಗೆಯು ಗುಣಿಸುತ ಮನದಿ ಮರುಗುತಿಹೆನೋ || ನಿಗಮೇಶ ನಿನ್ನ ವಂದರಘಳಿಗೆ ನೆನೆಯೆನೋ | ಜಗದೀಶ ಹರಿದಾಸವೇಷ ಧರಿಸಿದೆ ವ್ಯರ್ಥ || ೩ || ಗುಡ್ಡದಂತಿಹ ಪಾಪ ಖಡ್ಡಿಯಂದದಿ ಮಾಳ್ಪ | ದೊಡ್ಡವರ ದಿವ್ಯ ಪಾದಾಬ್ಜಗಳಿಗೇ || ಅಡ್ಡಬೀಳದೆ ಪರಮ ಧಡ್ಡನಾದೆನು ನಾನು | ಗಡ್ಡಪಿಡಿದ್ದೇಳಿಕೊಂಬೆನು ಮುಂದೆ ಯೇನೋ || ೪ || ಆದರದಿ ನಿನ್ನ ಪಾದಾರಾಧನಾದಿವರ | ಸಾಧನವ ಮಾಡಿದವನಲ್ಲ ನಾನೂ || ಶ್ರೀವಶ್ರೀಬಾದರಾಯಣ ವಿಠ್ಠಲನೆ ನೀ | ನಾದರದಿ ದಯಮಾಡಬೇಕಯ್ಯ ಕರುಣಾಬ್ಧೀ || ೫ ||

## ೧೧೯. ರಾಗ ಮುಖಾರಿ, ಝಂಪೆತಾಳ.

ಇಷ್ಟು ದಯಮಾಡಿದ್ದೆ ಅತಿಸೋಜಿಗಾ ॥ ಪಲ್ಲ ॥ ಸೃಷ್ಟೇಷ್ಟದಾಯಕನೆ ಭ್ರಷ್ಟಪಾಮರನಲ್ಲಿ ॥ ಅನುಪಲ್ಲ ॥ ಭಕ್ತಿಪೂರ್ವಕ ನಿನ್ನ ದಾಸನಾದವನಲ್ಲ । ಮುಕ್ತಿಗೋಸುಗ ನಿನ್ನ ಭಜಿಸಲಿಲ್ಲಾ ॥ ಭುಕ್ತಿಗೋಸುಗ ದಾಸನೆನಿಸಿಕೊಂಡಿದ್ದೆವಿ । ರಕ್ತಿಯೆಂಬುದು ಲೇಶವಿಲ್ಲ ನೀ ಬಲ್ಲೆಯಲ್ಲ ॥ ೧ ॥ ದೇಶದೇಶಕೆ ಪೋಗಿ ದಾಸಿ ಧನಮನೆಗಾಗಿ । ಆಸೆ ಪೂರ್ತಿಸದೆ ಆಯಾಸದಿಂದಾ ॥ ಹೇಸಿಜನರೊಳು ಕಿರಿದು ವಾಸುದೇವನೆ ನಿನ್ನ । ಲೇಸಾಗಿ ಭಜಿಸದಾಭಾಸಮಾನವನಯ್ಯ ॥ ೨ ॥ ಅತಿದುರಾಚಾರಿ ದುರ್ಮತಿ ದುರ್ವಿಷಯಾಸಕ್ತ । ಮಿತಿಯಿಲ್ಲ ಹೇಳಿಕೊಳೆ ಯೆನ್ನ ಪಾಪಾ ॥ ರತಿಪತೀಜನಕ ಶ್ರೀಪತಿವಿಠ್ಠಲನೆ ಯೆನ್ನ । ಕೃತಿಯನೇನೆಂಬೆ ಆಶ್ಚರ್ಯ ತೋರುವುದೂ ॥ ೩ ॥

## ೧೨೦. ರಾಗ ಸಾವೇರಿ, ಆದಿತಾಳ.

ಇಟ್ಹಾಂಗೆ ಇರುವೆನೋ ಹರಿಯೇ । ಯೆನ್ನಾ ಧೊರೆಯೇ ॥ ಪಲ್ಲ ॥ ಸೃಷ್ಟಿಗೊಂದಿತ ಪಾದ । ಪದ್ಮ ಶ್ರೀಹರಿಯೇ ॥ ಅನುಪಲ್ಲ ॥ ಸಣ್ಣ ಶಾಲ್ಯೋದನ್ನ ಬೆಣ್ಣೆಕಾಸಿದ ತುಪ್ಪ । ಚಿನ್ನಾದ ಹರಿವಾಣದಲಿ ಭೋಜನಾ ॥ ಘನ್ನಮಹಿಮ ನಿನ್ನಾ ಕರುಣ ತಪ್ಪಿದರೆ ಕ । ದನ್ನಕ್ಕೆ ಬಾಯಾ ಬಿಡಿಸುವೆಲ್ಲೊ ಸ್ವಾಮಿಾ ॥ ೧ ॥ ಕೆಂಪಿಲಿ ಪೊಳೆವ ಪೀತಾಂಬರನುಡಿಸುವಿ । ಸೊಂಪಿಸಂಚಿನ ಶಾಲು ಹೊದಿಸುವಿಯೋ ॥ ಕಪಿಲಾಹರೇ ನಿನ್ನಾ ಕೃಪೆ ತಪ್ಪಿದಾ ಮೇಲೆ । ಪಿನಾಕಿವಂದ್ಯ ಕೌಪೀನ ದೊರೆಯದೋ ॥ ೨ ॥ ಚಂದ್ರಶಾಲ ಚಂದ್ರ ಕಿರಣದಿಂದೊಪ್ಪುವೊ । ಚಂದಾದ ಮಂಚದೋಳ್ ಮಲಗೀಸುವೀ ॥ ಮಂದರೋದ್ಧರ ನಿನ್ನ ಮಮತೆ ತಪ್ಪಿದ ಮೇಲೆ । ಮಂದಿರದೋಳ್ ತೋಳ್ ತಲೆಗಿಂಬು ಮಾಡಿಸುವೀ ॥ ೩ ॥ ನರಯಾನದೊಳು ಕ್ಷಣ ನರವರನೆನಿಸುವಿ । ವರಛತ್ರಚಾಮರ ಹಾಕೀಸುವೀ ॥ ಕರುಣಾನಿಧೇ ನಿನ್ನ ಕರುಣಾ ತಪ್ಪಿದ ಮೇಲೆ । ಚರಣಾಭರಣ ಪಾದರಕ್ಷೆ ದೊರೆಯದೊ ॥ ೪ ॥ ಗಂಗಾಜನಕ ಪಾಂಡುರಂಗ ನಿನ ಭಕ್ತರ । ಸಂಗಾ

ವಿರಲಿ ದುಷ್ಟಸಂಗಾ ಬೇಡಾ || ಅಂಗನೆಯರಾ ಕೂಡ್ಯಾಸಂಗಬಾಣಕೆ ಸಿಲುಕಿ | ಭಂಗಪಡಲಾರೆ ಶ್ರೀರಂಗವಿಠ್ಠಲ ಧೊರೆಯೆ || ೮ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

೧೨೧. ರಾಗ ಬಿಲಹರಿ, ಝಂಪೆತಾಳ.

ಹರಿದಾಸನಾದರೇ ಹೀಗಿರಲು ಬೇಕು || ಪಲ್ಲ || ನರಲೋಕದಾ ಚಿಂತೆ ಬಿಟ್ಟಿರಲು ಬೇಕು || ಅನುಪಲ್ಲ || ಇಂದು ನಾಳೆಗೆ ಯೆಂಬ ಯೋಚನೆಯು ಬಿಡಬೇಕು | ಇಂದ್ರಿಯಂಗಳನೆಲ್ಲ ನಿಗ್ರಹಿಸಬೇಕೂ || ಬಂದದೆಲ್ಲಾ ಬರಲಿ ಈಗಲೇ ಯೆನಬೇಕು | ಅಂದವರು ತಮಗೆ ಬಹು ಬಂಧುಗಳು ಯೆನ ಬೇಕು || ೧ || ಸ್ನಾನವನು ಬಿಟ್ಟು ಹರಿಕಥೆಯ ಕೇಳಲುಬೇಕು | ದಾನಕ್ಕೆ ಸಮ್ಮುಖನಾಗಬೇಕು || ಮಾನಾಭಿಮಾನಕ್ಕೆ ಹರಿ ತಾನೆ ಯೆನಬೇಕು | ಏನಾದರಾಗಲೀ ಸುಖವಿದೆನಬೇಕು || ೨ || ಇರುಳ್ಹಗಲು ಹರಿಯನ್ನು ಸ್ಮರಣೆಮಾಡಲುಬೇಕು | ಪರಲೋಕಗತಿಯನ್ನು ಬಯಸಬೇಕೂ || ಗುರು ಹಿರಿಯರಿಗೆ ವಂದನೆಯ ಮಾಡುತಿರಬೇಕು | ದುರುಳರನು ನೋಡಿದರೆ ದೂರಾಗಬೇಕು || ೩ || ತಾವರೇಮಣಿ ತುಲಸಿಮಣಿಯ ಧರಿಸಲುಬೇಕು | ಭಾವಶುದ್ಧದಿ ನಿತ್ಯ ತಿರುಗಬೇಕು || ಕೋವಿದರ ಸಂಗದೊಳು ಕೂಡಾಡು ತಿರಬೇಕು | ಪಾವಕನ ತೆರದಿ ಪಾಪವ ನೋಡಬೇಕು || ೪ || ಅನ್ನಪಾ ನಕ್ಕೆ ಅವಸರಬೀಳದಿರಬೇಕು | ಕಣ್ಣಿದ್ದು ಕುರುಡನೆಂದೆನಿಸಬೇಕೂ || ಚನ್ನಾಗಿ ವಾಯುಮತದೋಲಾಡುತಿರಬೇಕು | ತನ್ನೊಳಗೆ ತಾ ತಿಳಿದು ನಗುತಿರಲುಬೇಕೂ || ೫ || ಬಿಂಬಮೂರುತಿಯ ಹೃದಯದಲಿ ನಿಲಿಸಲು ಬೇಕು | ಡಂಬಕಾಭಕುತಿಯನು ಜರೆಯಬೇಕೂ || ಡಿಂಬವನು ದಂಡಿಸೀ ವ್ರತವ ಮಾಡಲುಬೇಕು | ನಂಬಿ ಹರಿಪದವನ್ನು ತಾ ಸ್ಮರಿಸ ಬೇಕೂ || ೬ || ಹರಿಯಲ್ಲದನ್ಯತ್ರ ದೈವವಿಲ್ಲೆನಬೇಕು | ಮರುತನೇ ಪರಮಗುರುವೆನಲುಬೇಕು || ಪುರಂದರಾದಾಸರೇ ದಾಸರೆಂದೆನಬೇಕು | ಶಿರಿವಿಜಯವಿಠ್ಠಲನ ಸ್ಮರಿಸುತಿರಬೇಕು || ೭ || ಶ್ರೀ ||

## ೧೨೩. ರಾಗ ಗಮನಕ್ರಿಯ, ಆದಿತಾಳ.

ಜಯ ಜನಕಜಾಪತೇ ರಾಮಾ || ಜಯ || ಪಲ್ಲ || ಜನಕಜಾಪತೇ ಜಲದಶ್ಯಾಮಾ | ಜಯ ರಘುವಂಶಲಲಾಮಾ || ಅನುಪಲ್ಲ || ಮದನಜನಕ ಮಧುಕೈಟಭಭೀಮ | ಮದನಬಿಂಬಾರ್ಚಿತಕಾಮಾ || ಜಯ || ೧ || ರಾಮಚಂದ್ರ ರಘುವೀರ ಜಾನಕಿರಾಮ | ರಾವಣವೈರಿ ಶ್ರೀರಾಮಾ || ಜಯ || (ವಿರಾಮಾ) || ೨ || ಸಾಮಜವರದ ವಿನುತಸೋಮ | ಶ್ರೀದವಿಠ್ಠಲ ಗುಣಧಾಮಾ || ಜಯ || ೩ || ಶ್ರೀಃ ||

## ೧೨೪. ರಾಗ ಜುಂಜೂಟಿ, ಏಕತಾಳ.

ನಾನಪರಾಧಿ ಖರೇ ಪರಂತು | ನೀನುದ್ಧರಿಸು ದಯಾಳೋ || ಪಲ್ಲ || ಧನದಾ ಕಾಂಕ್ಷೆಯಲಿಂದೆ ನಾ ದು | ರ್ಜನರಾ ಮನೆಮನೆ ಪೋಗೀ | ಘನತರ ಸ್ತೋತ್ರವ ಗೈದವರಿಗೆ ನಾ | ನನುದಿನದಲಿ ಅನುವಾಗೀ || ಜನಮೆಚ್ಚುವ ಪರಿಯಂತೆ ಕಥಾದಿಗ | ಳನು ಪೇಳುವೆ ಚನ್ನಾಗೀ || ಇನಿತು ನುಡಿದಕಪ ಕೊಟ್ಟದಕೆನ್ನಯ | ಮನಸಿಗೆ ಹರುಷವು ಹುಟ್ಟಿದ ಪ್ರಯುಕ್ತ || ೧ || ವರಸವಿನೋಟದಿ ಪರಸ್ತ್ರೀಯರ | ಸುರುಚಿರ ಕಚಕುಚಕಾಗೀ | ಕರವಶವಾಗಲು ಅವರೊಳಗೇ ನಾ | ಬೆರದು ಮೋಸಕೊಳಗಾಗೀ || ಸ್ಮರನಾಟದಿ ವೈಮರದು ಮನದಿ ತ್ವ | ಚ್ಚರಣಸ್ಮರಣೆಯನು ಮಾಡದ ಪ್ರಯುಕ್ತ || ೨ || ಸದ್ವಿದ್ವಾಂಸರ ಕಂಡರೆ ನಾಬಲು | ಬದ್ಧಮತ್ಸರನು ಜೀಯಾ | ಮಧ್ವಶಾಸ್ತ್ರದಾ ಪ್ರವಚನವೆಂಬೋ | ಸುದ್ದಿಯು ಯೆನಗಿಲ್ಲಯ್ಯಾ || ಇದ್ದರೇನು ಸಾರ್ಥಕವು ನಾನೀದು | ರ್ಬುದ್ಧಿಯ ಬಿಡಲಿಲ್ಲಯ್ಯಾ | ಶುದ್ಧಭಾವದೀ ಮೋಕ್ಷಪ್ರದ ಅನಿ | ರುದ್ಧ ನಿನ್ನ ಮರೆಹೊಗದ ಪ್ರಯುಕ್ತ || ೩ || ಪರಲೋಕಕೆ ಪೋದರು ನಮ್ಮಿರಿಯರು | ಹಿರಿಯತನವು ಬಂತೆನಗೇ | ಹಿರಿಯರೆಲ್ಲ ಕಿರಿಯರಾದರೂ | ಅರುಹುವರ್‍ಯಾರಿಲ್ಲದ್ದಾಂಗೇ || ಅರುಹಿದ ಕಾರಣ ಚಿತ್ತೈಸದೆ ಧಿ | ಕ್ಕರಿಸುತ ನಾನವರೀಗೇ | ಸರಿಯಿಲ್ಲೆನಗೆಂದೆನುತ ಗರ್ವದಿಂ | ದುರುಳರ ಸಂಗದೊಳಿದ್ದ ಪ್ರಯುಕ್ತ || ೪ || ಕೊಟ್ಟದಕೇ ಸಂತುಷ್ಟನಾಗದಲೆ | ಸಿಟ್ಟಲಿ ಬೈವೆನೊ ನಾನೂ | ದುಷ್ಟನೊ

ನಾ ಪಾಪಿಷ್ಟನೊ | ಕೇಳ್ ಬಹು | ಭ್ರಷ್ಟ ಬುದ್ಧಿಯಿನ್ನೇನು || ಕೃಷ್ಣನೆ ಸನ್ಮಾರ್ಯರಿಗೆ ಸ | ದಿಷ್ಟಫಲಪ್ರದ ನೀನೆ | ಶಿಷ್ಟಜನೇಷ್ಟದ ತಂದೆ ಶ್ರೀಪತಿ | ವಿಠ್ಠಲ ಕೇಳ್ ಬುದ್ಧೀ ಪರಾಕು || ೫ || ಶ್ರೀ ||

೧೨೪. ರಾಗ ಕೇತಾರಗೌಳ, ಝಂಪೆತಾಳ.

ಸಿರಿಯು ಮದವೆ ಮುಕುಂದಾ ನಿನ್ನ || ಪಲ್ಲ || ಚರಣ ಸೇವಕರ ಬಿನ್ನಹ ಪರಾಕೆಲೊ ದೇವಾ || ಅನುಪಲ್ಲ || ಸಕಲ ಐಶ್ವರ್ಯದ ಶ್ರೀದೇವಿ ನಿನ್ನರಸಿ | ಯುಕುತಿಯುಲಿ ಲೋಕವನು ಸೃಜಿಸುವಂಥಾ || ಶಕುತ ನಿನ್ನಯ ಹಿರಿಯುಮಗನು ಪ್ರಾಣಿಗಳ ಮೋ | ಹಕದಿ ಮರುಳುಮಾಳ್ಪ ಕಿರಿಯುಮಗನೆಂತೆಂಬ || ೧ || ಅಷ್ಟದಿಕ್ಪಾಲಕರ ಮಧ್ಯದೊಳು ವೈಕುಂಠ | ಪಟ್ಟಣವು ಸಿರಿಯು ಓಲಗವು ನಿತ್ಯಾ || ಕಟ್ಟೆ ಓಲೈಸುವಾ ದಾಸರನಿಮಿಷರುಗಳು | ಮುಟ್ಟಿಪಾಡುವ ನಾರದ ಗೀತಸಂಭ್ರಮದಾ || ೨ || ಬಲ್ಲಿದರಿಗೆಲ್ಲ ಬಲ್ಲಿದನೆಂಬ ಬಿರಿದು ಅರಿ | ವಲ್ಲಣನೆಂಬ ಧೈರ್ಯ ಈಸಾಹಸಾ || ಇಲ್ಲ ನಿನಗಿದಿರಾರು ಎಂಬ ಗರ್ವದೊಳಿನ್ನ | ಸೊಲ್ಲ ಕಿವಿಯುಲಿ ಕೇಳದೆಂತಾಯಿತೆಲೊ ದೇವ || ೩ || ಶೇಷ ಹಾಸುವ ಮಂಚ ಏರುವ ಗರುಡ ತುರಗ | ವಾಸದುಡಿಗೆಯು ವೈಜಯಂತಿಮಾಲೆ || ಮಿಾಸಲಳಿಯುವ ಪೂಮಾಲಿಗಳ ಧರಿಸಿ ಜಗ | ದೀಶನೆಂಬೋ ಬಿರದು ಪೊಗಳುತಿಪ್ಪಾ || ೪ || ಭಕ್ತವತ್ಸಲನೆಂಬೊ ಬಿರಿದು ಬಿಡು ಇಲ್ಲದೊಡೆ | ಶಕ್ತ ಯೆನ್ನನು ಕಾಯೊ ಸುಲಭದಿಂದಾ || ನಿತ್ಯ ನಿನ್ನನು ಪಾಡಿ ಪೊಗಳುತಿಪ್ಪೆನು ಸ್ವಾಮಿ | ಕರ್ತು ನೆಲೆಯಾದಿಕೇಶವ ವೆಂಕಟೇಶಾ || ೫ || ಶ್ರೀ ||

೧೨೫. ರಾಗ ವಸಂತ, ಆದಿತಾಳ.

ಒಚಂದ್ರಾ ಧರೆಯೊಳೂ ಮೂಡಿದಾ || ಪ್ರಹ್ಲಾದನೆಂಬ || ಪಲ್ಲ || ಹೊಂದಿದೊಡೆಯ ಹೃದಯಾಂಧಕಾರ ಗುಣ | ಸಾಂದ್ರ ವ್ಯಾಸರಾಜೇಂದ್ರನೆಂಬುವ || ಅನುಪಲ್ಲ || ವಿಕಸಿತ ಸತ್ಕುಮುದಕೆ ಬಂಧೂ | ಖಳ | ಮುಖಾರವಿಂದವಳಿದು ಕೊಂದೂ | ಸುಖದಿ ಕುಣಿವ ಬುಧ ಚಕೋರತತ್ವ | ಪ್ರಕಾಶಕರ ಚಂದ್ರಿಕಾಪೂರ್ಣವಾದ || ೧ || ಹೇಯುಮತಗಳಿಲ್ಲವ

ಮುರಿದೂ | ಬಲು | ಬಾಯಿಬಾರದೆ ನಿಲ್ಲಲು ಜರಿದೂ || ಮಾಯಿಚೋ ರರು ಪಲಾಯನಗಯ್ಯಲು | ನ್ಯಾಯಾಮೃತಮಯ ವರುಷ (ವೃಷ್ಟಿ) ಕರೆಸಿದಾ || ೨ || ಕಂಡೂ ಗೋಪಾಲಕೃಷ್ಣನಾ ಪದವ | ಕದ | ರುಂಡಲಿ ಗೀಶ ಭಕ್ತನಾ ವೋದವ || ಕೊಂಡು ಭೂಮಂಡಲ ಪಂಡಿತಜನ ಮನ | ತಾಂಡವಾಡಿಪ ತರ್ಕತಾಂಡವ ಮಾಡಿದ || ೩ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೨೬. ರಾಗ ಉದಯರವಿಚಂದ್ರಿಕೆ, ಅಟತಾಳ.

ಪರಮ ಹರುಷವಾಯಿತು | ವಿಜಯರಾಯ | ಗುರುಗಳಂಘ್ರಿಯನೇ ಕಂಡೂ || ಪಲ್ಲ || ಪರಿಪರಿ ಜನುಮದ | ಥರಥರದಘಗಳು | ತಿರುಗಿ ನೋಡದಲೇವೆ | ತೆರಳಿಪೋದವು ಇಂದು || ಅನುಪಲ್ಲ || ಕಾನನದೊಳು ತಿರುಗೀ | ತನ್ನಾ ಮಾತೆ | ಯನ್ನೇ ಕಾಣದೇ ಚಿಂತಿಸೀ || ಧೇನಿಸಿ ಅರಸ ಲಾಕ್ಷಣದೊಳಗೆ ವತ್ಸ | ತಾನು ಕೂಗಲು ಕಾಮಾ | ಧೇನು ವದಗಿ ದಂತೆ || ೧ || ತರಣಿಯ ಕಿರಣದಿಂದಾ | ತಪಿಸಿ ಬಾಯಿಾ | ತೆರೆಯುತ ಬಪ್ಪವನಾ || ಕರವಪಿಡಿದು ಸುರ | ತರುವಿನೆಡೆಯಲಿ ಕು | ಳ್ಳಿರಿಸಿ ಕುಡಿಯೆ ದಿವ್ಯ | ಸರಸಿಯನಿತ್ತಂತೆ || ೨ || ಧನವ ಪೋಗಾಡೀಕೊಂಡೂ | ನರನು ಬಲೂ | ಮನಕ್ಲೇಶಬಡುತಿರಲೂ || ಘನಮಹಿಮನೆ ನಮ್ಮ | ವೋಹನ್ನ ವಿಠ್ಠಲ | ವನ ಕಯ್ಯೊಳಗೆ ಚಿಂತಾ | ಮಣಿಯನೆ ಇತ್ತಂತೆ || ೩ || ಶ್ರೀ ||

## ೧೨೭. ರಾಗ ತೋಡಿ, ರೂಪಕತಾಳ.

ಅನುದಿನಾ | ನಮಿಪೆ ನಾನಿನ್ನಾ || ಪಲ್ಲ || ನಮಿಪೆ ನಾನು | ವನರುಹ ದಳನಯನಾ || ಘನಮಹಿಮಾ | ಶ್ರೀರಮಣಾ | ಭಕ್ತಪಾವನಾ || || ಅನುಪಲ್ಲ || ಘೋರರಿಪಂ | ಸಾರಜನಿತಾ | ಪಾರದುಃಖಾಪ | ಹಾರ ಶೂರಾ || ೧ || ಮಧ್ವಹೃತ್ಪದ್ಮಸದನ | ಸಿದ್ಧವಿನುತ | ಪದ್ಮನಾಭ || ೨ || ಈಶ ವೆಂಕ | ಟೇಶವಿಠಲ | ದಾಸನೆನಿಸಿ | ಪೋಷಿಸೆನ್ನಾ || ೩ || ಶ್ರೀ ||

### ೧೨೮. ರಾಗ ಕರಹರಪ್ರಿಯ, ಆದಿತಾಳ.

ಕೃಷ್ಣ ಕೃಪೆಮಾಡೋ | ಕಣ್ಣಮುಂದಾಡೋ || ಪಲ್ಲ || ಇಷ್ಟಾರ್ಥವರಗಳ ಯೆನಗೆ ನೀಡೋ || ಅನುಪಲ್ಲ || ನಂದಕುಮಾರಾ | ನವನೀತಚೋರಾ | ಬೃಂದಾವನಾಂತರಾ | ಸಂಚಾರಾ || ೧ || ಕ್ರೋಧವರ್ಜಿತನೇ | ಕೌಸ್ತುಭಧರನೇ | ರಾಧಾಮುಖಾಂಬುಜ | ದಿನಕರನೇ || ೨ || ಯದುಕುಲತಿಲಕಾ | ಯಶೋದೆಬಾಲಕ | ಮದನಜನಕ ಮಧ್ವ | ಪತಿವಿಠಲಾ || ೩ ||

### ೧೨೯. ರಾಗ ಆರಭಿ, ಆದಿತಾಳ.

ಇದೇ ಸಮಯ ಹರಿಯೇ || ಪಲ್ಲ || ಇದೇ ಸಮಯ ನಿನ್ನ | ಪದಾಕಮಲ ತೋರಿ | ಸದಾ ಯೆನ್ನನು ನೋಡಿ | ಮುದಾದಿ ಸಲಹೊರೆ || || ಅನುಪಲ್ಲ || ನಾನಾ ಯೋನಿಲಿ ಬಂದು | ಜ್ಞಾನಾ ದುರ್ಲಭನಾಗಿ | ಹೀನಾನಾದವಗೆ ಸು | ಜ್ಞಾನಾ ಪಾಲಿಸುವರೆ || ೧ || ಆಶಾಪಾಶದಿ ಸಿಕ್ಕಿ | ಈಶಾನ ಮರತೆನೋ | ಲೇಸೂ ದಾರಿಯು ತೋರಿ | ದಾಸಾನ ಕಾಯ್ವರೆ || || ೨ || ಸಂತರ ಸಂಗ ನಿ | ರಂತರ ಪಾಲಿಸಿ | (ಸನ್ನುತ ಪಾಲಿಸಿ) ಅಂತರಂಗದಿ ಯೇ | ಕಾಂತ ಭಜನೆಗಾಗಿ || ೩ || ಹಿಂದೀನ ಸುಕೃತದಿ | ಬಂದೆ ಭೂಸುರನಾಗಿ | ಮುಂದಿನ ಪದಕಾಗಿ | ಕುಂದಾದೆ ಸಲಹೊರೆ || ೪ || ಶ್ರೀಪತಿವಿಜಯ ಶ್ರೀ | ವೆಂಕಟವಿಠಲನೆ | ತಾಪತ್ರಯ ಕಳದೆ | ಕಾಪಾಡಬೇಕೀಗ || ೫ || ಶ್ರೀಃ ||

### ೧೩೦. ರಾಗ ನವರೋಜು, ಆದಿತಾಳ

ಅಯ್ಯ ಸಾಕಿದೇನು ಚಂದಾ | ಮೈ | ಸೋಕದಿರೆಲೊ ಮುಕುಂದ || || ಪಲ್ಲ || ಗಂಡನುಳ್ಳ ನಿಜಗರತೀ | ವಡ | ಗೊಂಡು ಬದಿಗೆ ಕೈತರುತೀ | ಬಲು | ಪುಂಡಾಟಗಳ ನೀನೆಸಗುತೀ || ೧ || ಹೆಚ್ಚು ನುಡಿಯದಿರು ನಂಟೊ | ಕಂಡು | ಹುಚ್ಚುಮಾಡುವದುಂಟೊ | ನಡೆ | ಬಿಚ್ಚದಿರೆಲೊ ಮೊಲೆಗಂಟೊ || ೨ || ಶ್ರೀದವಿಠಲ ಯದುರಾಯಾ | ನಿನ್ನ | ಪಾದಕೆರಗುವೆನಯ್ಯಾ || ನಡುಬೀದಿಯೊಳಗೆ ಬಿಡುಕಯ್ಯಾ || ೩ || ಶ್ರೀಃ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೧. ರಾಗ ತೋಡಿ, ಏಕತಾಳ.

ಯದುಪತೀ | ನಮಗಾಗಲೀ ರತೀ || ಪಲ್ಲ || ತನುಮನಧನ ನಿನಗೊಪ್ಪಿಸಿ ನಲಿವಾ | ಅನುಭವಿಗಳ ಸಂಗತೀ || ೧ || ಶರಣಾಗತ ಪರಿಪಾಲಕನೆಂದೂ | ಮರೆಯದೆ ಇಂಥಾ ಮತೀ || ೨ || ಸ್ವಾಂತಧ್ವಾಂತ ಶ್ರೀದವಿಠ್ಠಲಾ | ಪ್ರಾಂತಕೆ ನೀನೇ ಗತೀ || ೩ || ಶ್ರೀ ||

## ೧೩೨. ರಾಗ ಯರಕಲಕಾಂಬೋಧಿ, ಆದಿತಾಳ.

ವೆಂಕಟೇಶ ಭವಸಂಕಟ ಪರಿಹರಿಸೋ | ನಿನ್ನ ವರವನೆನಿಸೋ || ಪಲ್ಲ || ಪಂಕಜಾಕ್ಷ ಅಕಳಂಕಮಹಿಮ ಹರಿಯೇ | ಆಶ್ರಿತರಿಗೆ ಧೊರೆಯೇ || || ಅನುಪಲ್ಲ || ನಾನಾ ಜನುಮಗಳಲ್ಲಿ ತೊಳಲಿ ಬಂದೇ | ನೀನೇ ಗತಿಯೆಂದೇ | ಜ್ಞಾನಾಜ್ಞಾನ ಕೃತಾಖಿಳ ದುಷ್ಕರ್ಮಾ | ಅದರಂತೆ ಸುಕರ್ಮಾ | ನಾನಾ ಬಗೆಯಲಿ ಇರುತಿರೆ ಅನುಭವಿಸೀ | ದುರ್ವಿಷಯವ ಬಯಸೀ | ಹೀನವೃತ್ತಿಯಲಿ ದಿನವ ಜರಿದು ಕಳದೇ | ಬಗೆಬಗೆಯಿಂದುಳಿದೆ || ೧ || ಧಾರುಣಿ ಧನವನಿತಾದಿ ವಿಷಯದಲ್ಲೀ | ಕಾಮುಕತನದಲ್ಲೀ | ಚಾರುವರಿಯುತಿಹೆ ಮಾರ್ಗ ಕಾಣೆ ನಾನೂ | ಉಪಾಯವಿನ್ನೇನು | ಯಾರಿಗೆ ಹೇಳಲಿ ಯೆನ್ನ ವರ್ತಮಾನಾ | ನೀನೇವೆ ನಿಧಾನ | ತೋರಿಸಿ ನಿನ್ನನು ಬಿಡದೆ ಪಾಲಿಸಪ್ಪಾ | ಯೆಣಿಸದಿರೀತಪ್ಪಾ || ೨ || ಪಾಪಾತ್ಮಕ ನಾನಾದರೇನು ಪೇಳೂ | ಪಾವನ ನೀನೇಳೂ || ಶ್ರೀಪದ್ಮಜಮುಖಪ್ರಮುಖ ನಿರ್ಜರೇಶಾ | ನಾನಿನ್ನ ದಾಸಾ | ನೀಪಾಲಿಸದಿರೆ ಗತಿಯೇನೋ ಮುಂದೇ | ಕಾರುಣ್ಯಾದಿ ತಂದೇ | ಶ್ರೀಪತಿವಿಠಲಾ ಕರಪಿಡಿಯೋ ಬೇಗಾ | ಉದ್ಧರಿಸೋ ಈಗಾ || ೩ || ಶ್ರೀ ||

## ೧೩೩. ರಾಗ ತೋಡಿ, ಆದಿತಾಳ.

ಭಯಕೃತದ್ಭಯಹಾರೀ | ರಾಧಾ | ನಯನೋತ್ಸವಹಾರೀ || ಪಲ್ಲ || ತಾಪತ್ರಯ ಪರಿಹಾರಕ ರಂಗಾ | ಗೋಪೀಜನ ಹೃತ್ಪದ್ಮಪತಂಗಾ || ೧ || ಸುಂದರ ಸುಸ್ಮಿತ ಶೋಭಿತವದನಾ | ಮಂದರಧರ ಮಾಧವ ಜಿತ

ಮದನಾ || ೨ || ದುಷ್ಟ ಕುಲಾಂತಕ ಧರೆಯೊಳು ಶ್ರೀದ | ವಿಠ್ಠಲ ವಿಧಿ ಹರ (ಭವ) ವಂದಿತ ಪಾದ || ೩ || ಶ್ರೀ: ||

## ೧೩೪. ರಾಗ ಸುರುಟಿ, ಆದಿತಾಳ.

ಹ್ಯಾಗೆ ನಿನ್ನ ಚರಣಾ | ಕಾಂಬುವೆ | ಯೋಗಿಜನರ ಶರಣಾ || ಪಲ್ಲ || ನಾಗಶಯನ ಸುಖಸಾಗರ ಮಮತೆಯು | ನೀಗಿ ಸಲಹೊ ಅನುರಾಗದಿಂದ ನಾ || ಅನುಪಲ್ಲ || ವ್ಯರ್ಥವಾಯಿತಲ್ಲಾ | ಜನುಮವು | ಸಾರ್ಥಕಾಗಲಿಲ್ಲಾ | ಮುಕ್ತಿ ಬಯಸಲಿಲ್ಲಾ | ಜ್ಞಾನವಿ | ರಕ್ತಿಯು ಮೊದಲಿಲ್ಲಾ || ವ್ಯರ್ಥ ತಿಳಿಯದಲೆ ಸುತ್ತಿ ಭವದಿ ಉ | ನ್ಮತ್ತನಡತೆಯಲಿ ಹೊತ್ತ ಕಳೆದೆ ಹರಿ || ೧ || ಸಾಕು ಭವದ ಸಂಗಾ | ಭವದೊಳ | ಗ್ಯಾಕದಿರೆಲೊ ರಂಗಾ || ಶ್ರೀಕರುಣೋತ್ತುಂಗಾ | ಕರುಣಿಸ | ಬೇಕು ಕೃಪಾಪಾಂಗಾ || ನೀಕರಿಸುವುದು ಇನ್ಯಾಕೆ ಪೇಳು ಕರು | ಣಾಕರ ಯೆನ್ನಯ ವಾಕು ಲಾಲಿಪುದು || ೨ || ಮಾಯ ಬಿಡದು ಹರಿಯೇ | ಮುಂದೆ ಉ | ಪಾಯವೇನು ಧೊರೆಯೇ || ಧ್ಯೇಯ ನಿನ್ನ ಮರೆಯೇ | ಅನ್ಯಸಹಾಯಕಗಳನರಿಯೇ || ಕಾಯಜಪಿತ ಕಮಲಾಯತಲೋಚನ | ಕಾಯದೊಳಗೆ ಸನ್ಯಾಯ ಇರಲಿ ನಾ || ೩ || ಎಲ್ಲಿ ನೋಡಲಿನ್ನಾ | ಸರಿ ನಿನ | ಗಿಲ್ಲ ಕೇಳೊ ಚನ್ನಾ | ಪುಲ್ಲನಾಭ ಯೆನ್ನಾ | ಕಾಯದಿ | ನಿಲ್ಲಬೇಕೊ ಘನ್ನಾ || ಎಲ್ಲ ಕಾಲವಲಿ ಜಯಿಸಲೆನ್ನ | ಸೊಲ್ಲ ಲಾಲಿಪುದೊ ಮಲ್ಲಮರ್ದನ ಕೃಷ್ಣ || ೪ || ವ್ಯಾಸವಿಠಲರಾಯಾ | ಯೆನ್ನಭಿ | ಲಾಷೆಯ ಸಲಿಸಯ್ಯಾ | ದೋಷಿಯೆಂದು ಕಯ್ಯಾ | ಬಿಡದೆ | ಪೋಷಿಸಯ್ಯ ಜೀಯಾ || ಈಶನೆಂದು ನಿನ್ನಾಸೆಗಯ್ಯಲು ಪರ | ದೇಶಿಯೆಂದು ಉದಾಸೀನ ಮಾಡದೆ || ೫ ||

## ೧೩೫. ರಾಗ ತೋಡಿ, ಮಟ್ಟೆತಾಳ.

ಎಂಥ ಕರುಣವಂತನೋ | ಶ್ರೀಕಾಂತನು || ಪಲ್ಲ || ಎಂಥ ಕರುಣವಂತ | ಸಂತತ ನಿನ ಪಾದ | ಚಿಂತಿತಜನ ಶುಭ | ಚಿಂತಾಮಣಿಯೆನೀನು || ಅನುಪಲ್ಲ || ಇನಕುಲದಲಿ ಬಂದು | ಜನಿಸಿ ಆ ವಿಶ್ವಾಮಿತ್ರನ ಯಜ್ಞ ರಕ್ಷಿಸಿ | ಜನಕರಾಯನ ದಿವ್ಯ | ಮನೆಗೆ ಪೋಪಾಗಲು | ಮುನಿ

ಸತಿಯಾ ಸಂಗ| ವನೆ ಮಾಳ್ಪೆನೆಂದು ಇಂ| ದ್ರನು ಬಂದು ಕೋಳಿಯಿಂ| ದೆನಿಸಿ ಕೂಗಲು ಗೌತು| ಮನು ಎದ್ದು ಸ್ನಾನ ನೆ| ವನಮಾಡಿ ಪೋ ಗಲು| ಅನುವಾಗಿ ಬಂದು ಆ| ಕಿನ ಸ್ವೀಕರಿಸಲಾಗ| ಪುನಮುಹರ್ಷಿಯು ತನ್ನ| ಮನೆಗೆ ಬಂದೀವಾರ್ತೆ| ಯನೆ ಕೇಳಿ ಆತತೂ| ಕ್ಷಣದಿ ಶಾಪವ ಕೊಡೆ| ಇನಿಯಾನು ನುಡಿದ ಮಾ| ತಿನತೆರ ಶಿಲೆಭಾವ| ವನೆ ತಾಳೀ ಬಿದ್ದಿರೆ| ವನಜಪಾವದಿ ತುಳಿಮೂ || ಕಾಯಿದೆ ಗೌತು| ಮನಸತಿಯನೆ ತಿಳಿದೂ || ಆಕ್ಷಣ ದಿವ್ಯ| ವನಿತೆ ಮಾಡಿದೆ ವಲಿದೂ || ಭಕುತಿಯಿಂದ| ವಿನಯದಿಂದವಳು ಪಾಡಿದಳು ತಾ ನಲಿದೂ ||೧|| ಹರಧನುವನು ನೀನು| ಮುರಿದು ಸೀತೆಯನಾಗ| ಬೆರದು ವೇಗದಲಿಂದ| ಪುರಕೆ ಬರೂವಾಗ| ಪರಶುರಾಮನ ಕೂಡೆ| ಕೆರಳಿ ಮನೆಗೆ ಬಂದು| ಸ್ಥಿರರಾಜ್ಯಪಟ್ಟವ| ಲಿರಿ ಸುವ ಸಮಯದಿ| ಎರಡನೆ ಮಾತೆ ಉ| ತ್ತರವ ಮನ್ನಿಸಿ ಚೀರಾಂ| ಬರವ ಧರಿಸಿ ನಿನ್ನ| ತರುಣಿ ಅನುಜರಿಂದ |ಸುರರ ಕಾರ್ಯಕೆ ವನ| ಚರಿ ಸುತಲಿರಲಾಗ| ಭರತರಾಯನು ತನ್ನ| ಪುರಕೇ ಬಂದೂ ಬಹು| ಮರುಗಿ ಮಂಥರೆಯ ಪ್ರಾ| ಹರಿಸಿ ಸಕಲ ಸೇನಾ| ಬೆರದು ತ್ವರಿತ ನಿನ್ನ| ಚರಣದಿ ಮನವಿಟ್ಟೋ || ಪ್ರಾರ್ಥಿಸೆ ನೀನು| ಎರಡು ಹಾವಿಗೆ ಕೊಟ್ಟೋ || ಕಳುಹಲಾಗಿ| ಹರುಷದಿಂ ಪೋದ ಮಾತಿಗೆ ವಡಂಬಟ್ಟೋ || ||೨|| ಮರುಳೆ ರಕ್ಕಸಿ ಮೂಕ್ಕ| ತ್ತರಿಸಿ ಮಾರೀಚನ್ನ| ಪರಿಹರಿಸಲು ಪೋಗೆ|ದುರುಳ ರಾವಣ ಅಪ |ಹರಿಸಲು ಸೀತೆಯ |ಅರಸುತ ಬರಲಾಗ| ಸುರಪತಿಸುತ ವಾಲಿ| ಕಿರಿಯ ಸುಗ್ರೀವನ| ತರುಣಿಯ ತಾ ಅಪ |ಹರಿಸಿ ನೀಕರಿಸಲು| ತರಣಿಜ ಮಿಡುಕುತ| ಮರುದಂಶನಾ ಅನು| ಸರಿಸಿ ಬರುತಲಿರೆ |ಹರಿ ನಿನ್ನ ಚರಣಕ್ಕೆ| ಎರಗಿ ಬಿನ್ನೈಸಲು| ಕರುಣದಿ ನೀ ವಂದೇ |ಶರದಿ ಸಪ್ತಾತಾಳ |ಮರಗಳ ಛೇದಿಸಿ| ದುರುಳಾನ ವಗದೆ ನೀ| ಬೆರಳಿಂದ ಮಹಿಮೆಯ| ನರುಪೆ ಮುಂದಕೆ ಸಾಗೀ || ಬರಲು ನಿನ್ನೆದಿರಿ ಲಿ|ಬ್ಬರೂ ವಂದಾಗೀ ||ಬರುತಲಿರೆ ಮರೆಯಾಗಿ ಅವನ ನೀಗೀ || ಸುಗ್ರೀ ವಗೆ ಯೆರದೆ ಸಾಮ್ರಾಜ್ಯವ ತ್ವರಿತ ನೀನಾಗೀ ||೩|| ಕುರುಹಿನುಂಗುರ ವನ್ನು| ಮರುತನ ಕೈಕೊಟ್ಟು| ಶಿರಿಯ ವಾರತೆಯ ತಂದರುಪೆಂದು

ಪೇಳಲು | ತೆರಳಿ ಕಪಿಗಳಿಂದ | ತ್ವರಿತ ಸಾಗರ ದಾಟಿ | ಪುರವೆಲ್ಲ ಶೋಧಿಸಿ | ಹೊರಗೆ ಆ ಶಿಂಶುಪ | ಮರದಡಿ ಸೀತೆಗೆ | ಯೆರಗಿ ಮುದ್ರಿಕೆಯಿತ್ತು | ಪುರವನೆಲ್ಲವ ಸುಟ್ಟು | ಮರಳಿ ನಿನಗೆ ಪೇಳ್ದ | ತರುವಾಯ ಅಣ್ಣಾಗೀ | ಪರಿಪರಿ ಬುದ್ಧಿಯ | ನರುಹೆ ವಿಭೀಷಣ | ಗರುವಿಕೆಯಲಿ ನಿರಾ | ಕರಿಸಿ ನುಡಿಯೆ ದಶ | ಶಿರನನುಜನು ಬಂದು | ಮರೆಹೊಕ್ಕು ಪೇಳಿದ | ಚರಿಯನೆಲ್ಲವ ಕೇಳಿ | ವರಕಪಿಸೇನೆಯಿಂದಾ || ಸೇತುವೆಯಾಗ | ವಿರಚಿಸಿ ಗಿರಿಗಳಿಂದಾ || ಸಕಲ ನಿಶಾ | ಚರರ ರಾವಣನ ಕೊಂದಾ || ಆಕ್ಷಣದೊಳು | ಶರಣಾಗೆ ಸ್ಥಿರಪಟ್ಟ ಕಟ್ಟಿದಾನಂದಾ || || ೪ || ವನಿತೆಯ ಗೂಡಿ ಲ | ಕ್ಷ್ಮಣ ಜಾಂಬವಂತನಿಂ | ದನುವಾಗಿ ಬರುವಾಗ | ಹನುಮನ ಕಳುಹೆ ಬೇ | ಗನೆ ಬಂದು ವಾರ್ತೆಗ | ಳನೆ ಕೇಳಿ ಬಲು ಭರ | ತನು ಹರುಷಿತನಾಗಿ | ಜನರಿಂದ ಇದಿರುಗೊಂ | ಡನು ಬರುವಾಗ ದಂ | ಧಣವೆಂದು ಭೇರಿಗ | ಳನು ಬಾರಿಸೇ ಝುಣ | ಝುಣರೆಂದು ವಾರಾಂ | ಗನೆಯರು ಹರುಷದಿಂ | ಕುಣಿಯೆ ನಾರದರು ತಂ | ಧಿನತಾಯೆಂದೂ ಪಾಡೆ | ಘನಸಂಭ್ರಮದಿ ಗ್ರಾಮ | ವನೆ ಪ್ರವೇಶಿಸಿ ಸಿಂಹಾ | ಸನರೂಢನಾಗಿ ಸ | ಜ್ಜನರ ಪಾಲಿಸಿ ಅನು | ದಿನದಲಿ ರಾಜ್ಯವ | ಜನಪನಂದದಿ ಆಳಿದೇ || ಅಭಿನವ ಜನಾ | ರ್ದನವಿಠಲನೆ ನಲಿದೇ || ಸಕಲ ಭಕ್ತ | ಜನಕೆ ಮುಕ್ತಿಯ ತೋರಿದೇ || ನಿನ್ನವತಾರ | ನೆನೆವರ ಸುರತರುವೆನಿಸಿ ನೀ ಮೆರೆದೇ || ೫ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೩೬. ರಾಗ ಮೋಹನ, ಝಂಪೆತಾಳ.

ಶ್ರೀಮಧ್ವಚಿತ್ತಮಂದಿರನೆ ನಿನ್ನಯ ಚರಣ | ತಾಮರಸ ನೆರೆನಂಬಿದೇ || ಕಾಮಕ್ರೋಧಗಳಳಿದು ನಿನ್ನ ಹರಿಮಂಗಳ ಸು | ನಾಮಾಮೃತವನುಣ್ಣಿಸೋ | ಸ್ವಾಮಿ || ಪಲ್ಲ || ಮಾರನುಪಟಳಕೆ ಆದರದಲೇ ನಾ ಬಹೂ | ಘೋರಬುದ್ಧಿಯನೆ ಮಾಡೀ || ಆರು ಇಲ್ಲದ ವೇಳೆ ಕಣ್ಣುಸನ್ನೆಯ ಮಾಡಿ | ಕೋರಿದ್ದು ಇತ್ತು ಕೂಡೀ || ಭಾರಿಭಾರಿಗೆ ಅವಳ ವಾರೆನೋಟಕೆ

ಸಿಲುಕಿ | ಕ್ರೂರವಮಾನವಳ (ಮಾನಿನಿಯ) ಕೂಡೀ || ವಾರಿಜಾನಾಭ ನಿನ್ನಾ ರಾಧನೆಯ ಬಿಟ್ಟು | ಧಾರುಣಿಗೆ ಭಾರವಾದೇ || ೧ || ಭೂಸುರರು ಚಂಡಾ ಲಜಾತಿಯೆನ್ನದಲೆ ಬಲು | ಹೇಸಿಕಿಲ್ಲದೆ ತಿರುಗಿದೇ || ಆಸತೀಸುತರ ಸಾಕು ವೆನೆಂದು ಪರಿಪರೀ | ವೇಷಗಳ ಧರಿಸಿ ಮೆರದೇ || ಆಶೆಯೆಂಬುವ ಮಹ ಪಿಶಾಚಿಗೊಳಗಾಗಿ ಹರಿ | ದಾಸರ ಸಹವಾಸ ಜರಿದೇ || ವಾಸುಕೀಶಯನ ವಸುದೇವತನಯನೆ ನಿನ್ನ | ದಾಸನೆನಿಸದಲೆ ಪರಿಹಾಸ ಮಾನವನಾದೆ || || ೨ || ಉಪರಾಗ ಮೊದಲಾದ ದಶಮಿ ದ್ವಾದಶಿ ವ್ರತಗ | ಳುಪೇಕ್ಷೆ ಮಾಡುತಲಿ ಕಳದೇ || ಉಪಕಾರವೆಂತೆಂದು ನಿಜವೃತ್ತಿ ಪೇಳಿದರೆ | ಅಪ ಕಾರವೆಂದು ತಿಳಿದೇ || ನಿಪುಣನೆನಿಸುವೆನೆಂದು ಅಜ್ಞಾನಿಗಳ ಮುಂದೆ | ತಪವೃದ್ಧರನ್ನು ಹಳಿದೇ || ಸ್ವಪನದೊಳಗಾದರೂ ವೈರಾಗ್ಯ ಭಜಿಸದಲೆ | ಕಪಟಮನುಜರೊಳಾಡಿ ನಿನ್ನ ಮರದೆನೊ ಸ್ವಾಮಿ || ೩ || ಹರಿದಾಸ ರಲ್ಲಿ ವಂದರೆಘಳಿಗೆ ಕುಳಿತರೇ | ಶಿರವ್ಯಾಧಿಯೆಂತಳಲುವೇ || ದುರುಳ ದುರ್ವಾರ್ತೆಗಳು ಪೇಳಲೂ ಹಶುತೃಷೆಯ | ಮರೆದು ಆಲೈಸಿ ಕೇಳ್ವೇ || ತರುಣಿ ಮಕ್ಕಳು ಯೆನ್ನ ಪರಿಪರಿಯ ಬೈವರೇ | ಪರಮ ಹರುಷದಿ ತಾಳುವೇ || ಗುರುಹಿರಿಯರೊಂದುತ್ತರವನಾಡೆ ಕೇಳ್ಯದನು | ಧರಿಸಲಾರ ವಲೆ ಮತ್ಸರಿಪೆನವರೊಡನೆ || ೪ || ನಾಮಾಡಿದಪರಾಧ ಬರೆವೆನೆಂದೆ ನಲು ಈ | ಭೂಮಂಡಲವು ಸಾಲವೂ || ಸೀಮೆಯೊಳಗುಳ್ಳ ದುರ್ನೀತಿ ಗಳೆಲ್ಲ ಕೂಡಿದರೆ | ಈಮತಿಗೆ ಅದು ಹೋಲದೂ || ಹೋಮ ಜಪತಪ ಗಳನು ಇಷ್ಟು ಮಾಡಲು ಪಾಪ | ಸ್ತೋಮವಗಲದು ಯೆಂದಿಗೂ || ಸಾಮ ಜಾವರದ ಮೋಹನವಿಠ್ಠಲನೆ ನಿನ್ನ | ನಾಮ ವಂದಲ್ಲದೇ ಪ್ರಾಯಶ್ಚಿ ತ್ತವ ಕಾಣೆ || ೫ || ಶ್ರೀ೬ ||

## ೧೩೭. ರಾಗ ವರಾಳಿ, ಝಂಪೆತಾಳ.

ನೀ ಕರುಣದಿಂದ ಪಾಲಿಸದಿದ್ದರೇ ಇನ್ನು | ನಾಕಾಣೆ ಮನ್ನಿಸುವರಾ || || ಪಲ್ಲ || ಸಾಕಾರರೂಪ ಸರ್ವೋತ್ತಮನೆ ಸಲಹಯ್ಯ ಪ | ರಾಕುಮಾಡದೆ ಯೆನ್ನನೂ || ಅನುಪಲ್ಲ || ಗುರುಹಿರಿಯರನು ಕಂಡು ದುರುಳತನದಲಿ ನಾನು | ಚರಣಕೆರಗದೆ ಪೋದೆನೋ | ಸ್ಮರನ ಬಾಣಕೆ ಸಿಲುಕಿ ಪರ

ಸತಿಗೆ ಮನವಿತ್ತು | ದುರುಗತಿಗೆ ವಳಗಾದೆನೋ || ವರಸಕಲ ಸಂಪದವು ಬರಿದೆ ಬಯಸುತ ನಿಮ್ಮ | ಚರಣವನು ನಾಮರತೆನೋ | ಪರಮಪುರು ಷನೆ ನಿನ್ನ ಪಾದದೊಲವೆನಗಿತ್ತು | ಕರಪಿಡಿದು ಕಡೆಹಾಯಿಸೈ || ರಂಗಾ || || ೧ || ಆರುಮಂದಿಗಳೆಂಬ ಕ್ರೂರ ವೈರಿಗಳಿಂದ | ಗಾರಾದೆ ಅವರ ದೆಶೆ ಗೇ || ಮಾರಿಹಬ್ಬದ ಕುರಿಯು ತೋರಣವ ಮೆಲುವಂತೆ | ತೋರುತಿದೆ ಮತಿಯು ಯೆನಗೇ || ಘೋರಪಾತಕವೆಂಬ ವಾರಿಧಿಯ ದಾಟಿಸುವ | ಚಾರುತರ ಬಿರಿದು ನಿನಗೇ || ಮಾರನಯ್ಯನೆ ನಿನ್ನ ಮಹಿಮೆಗಳ ಕೇಳಾಡಿ | ಸಾರಿದೆನೊ ನಿಮ್ಮಡಿಗಳಾ || ರಂಗಾ || ೨ || ಹಲವು ಜನುಮದಿ ಬಂದು ಬಲುನೊಂದು ಬಾಯಾರಿ | ಬಲು ಬಳಲುತೊಳಲುತ್ತಲಿಹೆನೋ | ಸಲೆ ಉದರಪೋಷಣಕೆ ತಲೆಹುಳತ ನಾಯಂತೆ | ಹಲಕಾಲ ತಿರುಗುತಿ ಹೆನೋ || ಜಲದ ಮೇಲಣ ಗುಳ್ಳೆಯಂತಿಪ್ಪ ದೇಹವನು | ನೆಲೆಯೆಂದು ನಂಬುತಿಹೆನೊ || ಸುಲಭದಲಿ ನಿನ್ನ ನೆನೆವುದನಿತ್ತು ಸಲಹೆನ್ನ | ಚೆಲುವ ಶ್ರೀಹಯವದನನೇ || ರಂಗಾ || ೩ || ಶ್ರೀ ||

## ೧೩೮. ರಾಗ ಕೇದಾರ, ಝಂಪೆತಾಳ.

ಏಕೆ ಬಿಡಲಾರೆ ಮಮತೇ | ಯೆಲೆ ಮನವೆ | ನೀಕಂಡ್ಯ ಭವದ ಸುಖ ವೂ || ಪಲ್ಲ || ಬಹು ಜನುಮಜನುಮಗಳಲೀ | ಕೂಡಿದಾ | ಸಹವಾಸ ಬಿಡಲಾರೆಯೋ || ಬಹುವಿಧದಿ ಅವರು ನಿನಗೇ | ಮಾಡಿದಾ | ಬಹು ಸ್ನೇಹ ಮನದೊಳಿಹುದೇ || ೧ || ಇರುವು ನೊಣ ನೀನಾಗಿರೇ | ಇವರು ನಿ | ನ್ನಿರವ ನೋಡೀ ಬಳಲುತ || ಪರಿಹರಿಸೆ ಆದೇಹವೂ | ನಿನ ಗಿಂಥ | ಇರವು ತಂದಿತ್ತರೇನೋ || ೨ || ಹದ್ದು ಗೂಗೀಯಾಗಿರೇ | ಇವರು ನೀ | ನಿದ್ದಲ್ಲಿ ಕಾದಿದ್ದರೇ || ಹೊದ್ದಿದವರನು ಬಿಡುವದೇ | ಪಾಪ ವನು | ತಿದ್ದಿ ನೀ ಕಾಪಾಡದೇ || ೩ || ಎಂಭತ್ತನಾಲ್ಕುಲಕ್ಷ | ಯೋನಿ ಯಲಿ | ನಂಬಿ ನಿನ್ನಲ್ಲಿ ಇದ್ದಾ || ರೆಂಬುದೂ ತಿಳಿದು ಅವರಾ | ಪ್ರೀತಿ ಬಲು | ಹಂಬಲೂ ಬಿಡಲಾರೆಯಾ || ೪ || ನರಲೋಕದಲ್ಲಿ ನೀನು | ದುಃಖವನು ಪಿರಿದಾಗಿ ಬಡುವಾಗಲೂ || ಪರಿಹರೀಸಿದ್ದರೇನೋ | ಅದ ಕಾಗಿ | ಪರಿಹರಿಸಲೊಲ್ಲೆ ಮೋಹಾ || ೫ || ಹರಿ ನಿನ್ನ ಕೂಹಲೊಮ್ಮೆ |

ಕೂಡಿದ್ದು | ಅರೆಘಳಿಗೆ ಕಾಣಲಿಲ್ಲಾ || ಸ್ಮರಿಸುವಾದ್ಯಾಕೆ ನಿನಗೇ | ಹರಿ ಪಾದ | ಸರಸಿಜದ ಭಕುತಿಯಾಕೊ || ೬ || ಹೀಗೆ ಕೆಡಬ್ಯಾಡ ಮನದೀ | ಯಿಾಭೋಗ | ರಾಗಸಾಗರದಿಂದಲೀ || ನೀಗದೂ ನಿನಗೆ ದುಃಖಾ | ನರಕ ವಲಿ | ಹ್ಯಾಗೆ ನೀ ಬಾಳುವೆಂತೋ || ೭ || ಆಸೆಯಿಾತನುವಿಲಿರದೂ | ಋಣಬಡಿಸಿ | ಪೋಷಿಸಿದೆ ಸುಖವೆರೆಯದೇ || ಈಸಮಯದಲ್ಲಿ ಸ್ಮರಿ ಪೇ | ನೀಯೆನ್ನ | ಪೋಷಿಸುವ ಬಗೆಯು ಹೇಗೋ || ೮ || ಇನ್ನಾದರೂ ಭವದಲೀ | ಮಮತೆಯನು | ಚನ್ನಾಗಿ ಬಿಟ್ಟು ಹರಿಯಾ || ಘನ್ನಭಕು ತೀಯಿಂದಲೀ | ರಘುಪತಿವಿಠ | ಲನ್ನ ನೆನೆಯೋ ಮನದಲೀ || ೯ ||

## ೧೪೯. ರಾಗ ಭವಶ್ರೀ, ಏಕತಾಳ.

ಎತ್ತಾದೆ ಯೆನ್ನವ್ಮಾ | ನಂಗನ | ಯೆತ್ತಿಕೋ ಯೆನ್ನ || ಪಲ್ಲ || ಬಲಹೊತ್ತು ಅತ್ತಿ ಬಂದೇನೇ ಅವ್ಮಿಯಿತ್ತೆ ತಿಂದೆನೇ || ಅನುಪಲ್ಲ || ತುತಿಬಾಯಿ ವಂಗ್ಯಾವೇ | ಬಿಸಿವಾವು | ವಾಕಿಕ್ಕಿ ಬತ್ತಾವೇ || ಅತ್ತಿವಾವು ಉಪ್ಪುಕಾಯಿ ಅವ್ಮಮ್ಮ ವಲ್ಲೆನೆ | ಉತ್ತುತ್ತಿ ಅನ್ನು ಬೆನ್ನೆ ತಿಂದೇನೇ || || ೧ || ಕಲ್ಲಕಿತ್ತನಂತಾಡೇ | ಬಂಗಾಡ | ಬುಲ್ಲಿಬಾಲ ತಿಂತಾಡೇ || ಗಲ್ಲ ಕತ್ತಿಕತ್ತಿ ಉವ್ಮ | ಅಲ್ಲು ನತ್ತುತಾಡೇ | ಕೊಬ್ಬಾದೇ ದುತ್ತ | ಗೊಲ್ಲ ತೇನಾ || ೨ || ಯೆಕ್ಕೊ ಬಾಯಂಬಾಡೇ | ಬಿಸಿ ನೀವು | ಬುಕಸಿವಾ ಬ್ಯಾಡೇ || ತಕ್ಕರಿತಿನ್ನೀವಾವು ಬತ್ತಲು ತುಂಬಾಕೊವು | ಬೊಕ್ಕುವಾ ಯಿಗಳ ಕೂಡೆ ತಿಂದೇನೇ || ೩ || ಲಾಲೀವಾಡಿಸಬ್ಯಾದೇ | ಕಿತ್ತನ್ನ | ವ್ಯಾಲೀ ತೂಗಲು ಬಾದೇ || ಬಾಲಾಚ ಕಂದಾನ | ಗಂತಿಕ್ಕಿ ಬತ್ತದೆ | ದೋಲಿಯನ್ನು ಬತ್ತು ನೀವೋಗಬಾದೆ || ೪ || ನತ್ಯತ್ತ ತಂದು ತೋ ವೇ | ಚಂದವಾವು | ನಿತ್ತತ್ತ ಕಡತಾದೇ || ಪುತ್ತುಮಿಲೆ ತುಂಬೆವಲೆ | ಮುತ್ತುಕೊಟುರಚೆನ್ನ | ಬುತ್ತಿ ತುಂಬಾ ಅನ್ನು ತಂದು ತಿಂದೇನೇ || || ೫ || ಉಗ್ಗು ಕೂಸು ಬಾಯಿಾಗೇ | ಬಚ್ಚವ್ಮಿ | ಕೂಗವ್ಮಿತೂನಂಗೇ || ಕೂಗವ್ಮಿಚೀದೋಯಿಾಗೇಕೊ ಬ್ಯಾಡೇ | ಬಾಗೀಲ ಹೊಗ್ಗ | ವೋ ಗೋದಿಲ್ಲ ತಿಂಗನಾಣೆ || ೬ || ಕೂಸಿಗವ್ಮಿಕೊ ಬ್ಯಾದೇ | ನಂಗಂಗ |

ಅಚ್ಯುತಾನೆ ಅಮ್ಮ ನೋಡೇ | ಪಚನ್ನವೆಂಕತ | ಕಿತ್ತನ್ನ ಕನ್ನಡಿಯೊಳು | ನಸುನಗುವಾತನ ನೀ ಕಡತಾಡೇ || ೭ || ಶ್ರೀಃ ||

## ೧೪೦. ರಾಗ ಬೇಹಾಗ್, ರೂಪಕತಾಳ.

ವ್ಯರ್ಥವಾಯಿತೂ | ಬಾಳು | ವ್ಯರ್ಥವಾಯಿತೂ || ಪಲ್ಲ || ಪಾರ್ಥಸಾರಥಿ ನಾಮ ಸ್ಮರಿಸಿ | ತೀರ್ಥನಾಗದವನ ಬಾಳು || ಅನುಪಲ್ಲ || ಅರ್ತಿಯಿಂದಾನಂದತೀರ್ಥರ | ಶಾಸ್ತ್ರವನ್ನು ಶ್ರವಣಮಾಡಿ ವಿ || ರಕ್ತಿ ಭಕ್ತಿ ಮುಕ್ತಿ ಪಡೆದು | ಸಾರ್ಥಕಾಗದವನ ಬಾಳು || ೧ || ಪರಮ ಹರುಷದಿಂದ ಹರಿಯ | ಶರಣರನ್ನು ಸೇರಿಕೊಂಡು || ಹರಿವಾಸರದಿ ಉಪವಾಸಜಾ | ಗರವ ಮಾಡದವನ ಬಾಳು || ೨ || ಹೆಂಡತಿ ಸುತರೆಂಬೊ ಮಾಯಾ | ಚಂಡ ಪಾಶದೊಳಗೆ ಸಿಲುಕಿ || ಪುಂಡರೀಕನಯನನ ಮುದ | ಗೊಂಡು ಸ್ತುತಿಸದವನ ಬಾಳು || ೩ || ಹೆಣ್ಣು ಹೊನ್ನು ಮಣ್ಣಿಗಾಗಿ | ಸುಣ್ಣವನ್ನು ಕಣ್ಣಿನೊಳೂ || ಚಿಣ್ಣ ನೀನು ಹಾಕಿಕೊಂಡು | ಬನ್ನಬಡುವುದೇತಕಿಂತು || ೪ || ಕ್ಷೀರಶರಧಿಯನ್ನು ಸೇರಿ | ನೀರುಮಜ್ಜಿಗೆ ಬಯಸಿದಂತೆ || ಶ್ರೀಗುರು ವೇಂಕಟೇಶನಿರಲು | ನರರ ಪೊಗಳಿಕೊಂಡು ಜನುಮ || ೫ || ಶ್ರೀಃ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೪೧. ರಾಗ ಧನ್ಯಾಸಿ, ಆದಿತಾಳ.

ಕರುಣದಿ ಕಣ್ಣ ತೆರೆಯೋ | ಬಾರಮ್ಮ ಶಿರಿಯೇ || ಪಲ್ಲ || ಸುಂದರ ಕರದರ | ವಿಂದದ ಮಲ್ಲಿಗೆ | ಮಂದಹಾಸ ಮುಕ | ರಂದವ ಸುರಿಯೇ || || ೧ || ಕಡುಬೆಡಗಿನೊಳು ನಿ | ನ್ನಡಿದಾವರೆಗಳ || ಬಿಡದೆ ಭಜಿಪರಿಗೆ | ಕೊಡು ಸೌಂದರ್ಯೆ || ೨ || ಕೊಟ್ಟೂರೆ ಕಮಲೇಶ | ವಿಠ್ಠಲರಾಯನ || ಪಟ್ಟದರಸಿಯೆಂಬೊ | ಬಿರಿಮುಳ್ಳ ಶಿರಿಯೇ || ೩ || ಶ್ರೀಃ ||

## ೧೪೨. ರಾಗ ಕಾಂಬೋಧಿ, ಝಂಪೆತಾಳ.

ಭಿಕ್ಷವ್ಯಾಕಯ್ಯ ಫಾಲಾಕ್ಷ ನಿನಗೇ |-ಶ್ರೀ-| ಲಕ್ಷ್ಮಿಪತಿ ನಿನ್ನ ಪ್ರಿಯಸಖನಾದಬಳಿಕಾ || ಅನುಪಲ್ಲ || ರಜತಾದ್ರಿಯರಮನೆಯುಃ ಹೇಮಗಿರಿಯೇ

ಧನವು | ಅಜಸುರಾದಿಗಳಲ್ಲಿಯತಿ ವೈತ್ರಿಯೂ || ಗಜಮುಖ ಕುಮಾರರೀರ್ವರು ಗಂಡುಮಕ್ಕಳೂ | ನಿಜರಾಣಿ ಅನಪೂರ್ಣೆಯಿರುತಿರಲು ನಿನಗೇ || ೧ || ಬ್ಯಾಡ ಅದು ಬಿಟ್ಟು ನಿನ್ನೈತ್ತು ಯಮುನಿಗೆ ಕೊಟ್ಟು | ಮಾಡಬಾರದೆ ಮುಯ್ಯ ಅವನ ಕೋಣಾ || ರೂಢಿಯೊಳು ನೀನೀಗ ಬಾಸಮುಟ್ಟಿ ತ್ರಿಶೂಲ | ಬೇಡಿದ್ದು ಬೆಳೆಯದೇ ಬರಿಯಧಾವತಿಗೊಂಬೆ || || ೨ || ರೊಕ್ಕ ರೂಪಾಯಿಗಳು ಇಲ್ಲೆಂಬೆಯಾ ಸಾಲ | ತಕ್ಕೊ ಬಾರದೆ ಗೆಳೆಯ ಧನಪನಲ್ಲೇ || ಶುಕ್ರ ಒಕ್ಕಣ್ಣ ಮೋಹನವಿಠಲ ಇಕ್ಕಣ್ಣ | ಮುಕ್ಕಣ್ಣ ನೀನಾಗಿ ಮುಂಜಿಮಂತ್ರವ ಬಿಡದೆ || ೩ || ಶ್ರೀಃ ||

## ೧೪೩. ರಾಗ ಭೈರವಿ, ತ್ರಿವುಡೆತಾಳ.

ಮನಸೂ ನಿಲ್ಲಿಸೊ ನಿನ್ನಾ | ಚರಣಕಮಲದೊಳು | ಅನುದಿನ ಶ್ರೀಹರಿಯೇ || ಪಲ್ಲ || ಪರಮಪುರುಷ ಕೃಷ್ಣ | ಕರುಣಾಸಾಗರ ಕೇಳು | ಪರಿಪರಿ ಜನ್ಮದೊಳೂ | ಪರಿಭ್ರಮಿಸೀ ಈಗ || ನರದೇಹದಲಿ ಬಂದು | ಹರಿ ನಿನ್ನ ಭಜಿಸಾದೆ | ಅರಿತೂ ಅರಿಯದಂತೆ | ಪರರಾ ಬಾಗಿಲ ಕಾಯ್ದೆ || ಶರಧಿಮಂದಿರ ಶ್ರೀಧರಾ ನಿನ್ನ | ಪರಮಮಂಗಳ ಸುನಾಮವಾ | ಮರೆಯದಲೆಯರೆಘಳಿಗೆಯಾದರು | ಸ್ಮರಿಸದಲೆ ದಿನಗಳನು ಕಳದೆನು || ೧ || ಹಿಂದಿನ ಅನುಭವ | ಒಂದಾ ನಾನರಿಯೇನು | ಮುಂದೇ ಬರುವಾದಂತೂ ಮೊದಲರಿಯೇ || ಹಿಂದಿನ ಭವವೆಂಬ | ಬಂಧನದೊಳು ಸಿಲುಕಿ | ನಿಂದಿತ ಕರ್ಮಗಾಳೊಂಧ ನಾ ಬಿಡೆನಯ್ಯ || ಮಂದರಾಧರ ಮಾಧವಾ ಯೆನ್ನ | ಕುಂದುಗಳನೊಂದೆಣಿಸದೇ ಸ್ವಾಮಿ | ಬಂದು ಸಲಹುವ ಸಕಲ ಗುಣಗಣ | ಸಿಂಧು ನೀಯೆಂದು ನಿನ್ನ ನಂಬಿದೆ || ೨ || ನಿನ್ನ ಪಾದವ ನಂಬಿ | ನಿನ್ನಾವನೆನ್ನಿಸಿ | ಅನ್ಯಾರಾ ಸ್ತುತಿಸಿ ನಾ | ಬಲು ನುತಿಸೀ || ಯೆನ್ನಾ ಶರೀರಾವ | ಅಡಗೀಸಿ ನಡಗುತ್ತ | ಬನ್ನವ ಬಡಾಲಾರೆ | ದೀನರಕ್ಷಕ ಕೇಳೋ || ಯೆನ್ನ ಮಾನಾಭಿಮಾನಕೇ ಕೃಷ್ಣ | ಇನ್ನು ನೀ ಹೊಣೆಯಲ್ಲವೇ ಸ್ವಾಮಿ | ಮನ್ಮನೋರಥದಾತ ಸುರವರ | ಮಾನ್ಯ ಶ್ರೀನಿವಾಸವಿಠಲ ಕರುಣದಿ || ೩ || ಶ್ರೀಃ ||

೧೪೪. ರಾಗ ಬೇಹಾಗ್, ಏಕತಾಳ.

ಉಡುಪಿಯ ಕೃಷ್ಣನ | ಸಡಗರ ನೋಡುವ | ನಡಿಯೇ ನಾರೀಮಣಿ || || ಪಲ್ಲ || ಪೊಡವಿಗೆ ಉಡುಗೆಯು | ಪಡುವಲಗಡಲದ | ದಡದಲಿ ನಿಲಿಸಿರುವಾ | ಚೆಲುವಾ || ಅನುಪಲ್ಲ || ಅಲವಬೋಧಮುನಿಗಳ ಪ್ರೀತಿಲಿ ತನ | ಬಲದಲಿ ನಿಲಿಸಿರುವಾ | ಚೆಲುವಾ || ಹಲವು ಪೂಜೆಗಳ | ಸಲಿಸುವ ಯತಿಗಳ | ವಳಗೆ ಹೊರಗೆಯಿರುವಾ | ಚೆಲುವಾ || ೧ || ನವನವ ಪೂಜೆಯು | ವಿವಿಧಾಲಂಕಾರದಿ | ತಾಮಾಡಿಸಿಕೊಳುವಾ || ಭುವನಮೋಹನರೂ | ಪವ ನೋಡುವರಿಗೆ | ವಿವರದಿ ಕಾಣಿಸುವಾ | ಚೆಲುವಾ || ೨ || ಶ್ರೀಕಮಲೇಶವಿಠ್ಠಲರಾಯನು ತಾ | ಬೇಕಾಗಿಲ್ಲಿರುವಾ || ಈಕಲಿಯುಗದೊಳಿದೇ ಕೈವಲ್ಯವು | ತಾಕಾಮಿತ ಕೊಡುವಾ | ಚೆಲುವಾ | ನಿವ || ೩ ||

೧೪೫. ರಾಗ ಯದುಕುಲಕಾಂಬೋಧಿ, ಆದಿತಾಳ.

ದಯದಿ ಪಾಲಿಸೋ ಜಯತೀರಥರಾಯ | ಅಕ್ಷೋಭ್ಯರ ತನಯ || || ಪಲ್ಲ || ಅತ್ಯಂತ್ತರುಷದಿ ಎತ್ತಾಗಿರುತಿರಲೂ ಶ್ರೀ | ಆನಂದತೀರಥರೂ | ನಿತ್ಯ ಪಠಿಸುವೋ ಪುಸ್ತಕ ಹೊರುತಿರಲೂ || ಗುರುರಾಯರು ಪೇಳಿದ | ತತ್ವಗ್ರಂಥವನೆ ಕಿವಿಯಲಿ ಕೇಳುತಲೀ | ತಲೆಯನು ತೂಗುತಲೀ || ಮತ್ತೆ ಪುಟ್ಟಿದ್ಯೋ ಮಂಗಳವೇಡಿಯಲೀ | ಅತಿಮತಿವಂತರಲೀ || ೧ || ದೇಶಪಾಂಡೆರಾ ಕೂಸಾಗೀ ಜನಿಸೀ | ಘನ ರಾವುತನೆನಿಸೀ | ದೇಶದೇಶದೋಳ್ ಸ್ಯೈನ್ಯವನೇ ಚರಿಸೀ | ಹಣವನ್ನೇ ಘಳಿಸೀ | ವಾಸುಕಿಯೆಂಬೋ ಗುರುತನೆ ತಪ್ಪಿಸೀ | ನದಿಗೇ ನೀರೆರಸೀ || ಶ್ರೀಶನಾಜ್ಞೆಯೊಳಿವರನೆ ಕರತರಿಸೀ | ಶಿಖೆಸೂತ್ರವ ತೆಗಿಸೀ || ೨ || ಹಿಂಡು ಹಿಂಡು ಜನ ಅಂಡಲಿಯುತ ಬಂದೂ | ಅಕ್ಷೋಭ್ಯಾತೀರಥರಾ | ಕಂಡು ಭೇಟಿಯಾ ಮಾಡುತಲೇ ನಿಂದೂ | ಧೊಂಡೋ ರಘುನಾಥನ | ಹೆಂಡತಿ ಗಂಡನ ಕೂಡಿಸಬೇಕೆಂದೂ | ಸುಮ್ಮನೆ ಕರೆತಂದು ಪ್ರ || ಚಂಡಸರ್ಪನಾ ರೂಪವ ತಾಳ್ದಂದೂ | ಭಯವ ಪಟ್ಟರಂದೂ || ೪ || ಮಧ್ವಶಾಸ್ತ್ರಗಳನುದ್ಧರಿಸುತಲದನಾ (ಸದ್ಗಲಗುತಲಿದನಾ) | ಟೀಕೆಯನೇ ಮಾಡೀ | ವಿದ್ವಜ್ಜನರಿಗೆ ತಿದ್ದಿಯೆ

ಪೇಳುತಲೀ | ನಾನಾ ಬಗೆಯಿಂದಲಿ | ಪದ್ಧತಿ ತಿಳಿಸಿದ | ಗುರುರಾಯರು ನೀವು | ಯತಿವರ ಸುರಧೇನು | ಅದ್ವೈತರ ಗುರು ವಿದ್ಯಾರಣ್ಯರ | ಗೆದ್ದ ಸಿಂಹ ನೀನೂ || ೪ || ಆಷಾಢ ಬಹುಳ ಪಂಚಮಿಯೂ ಬರುತಾ | ಕಳೆ ಬರವನೆ ಬಿಡುತಾ | ವ್ಯಾಸವಿಠ್ಠಲನ ಪಾದದಲೀ ನಿರುತಾ | ಮಳಖೇಡ ಸ್ಥಳದಲಿ | ನಿರುತದಿ ವಾಸಿಪೆನೆಂಬೋ ಪ್ರಖ್ಯಾತಾ | ನಿಜಗುಣಗಣ ನೀತಾ | ಬ್ಯಾಸರದಲೆ ಕೊಂಡಾಡಿದರೀ ನಿತ್ಯಾ | ಇಷ್ಟಾರ್ಥವನಿತ್ತಾ || ೫ ||

|| ಶ್ರೀಮಧ್ವೇಶಾರ್ಪಣಮಸ್ತು ||

೧೪೭. ರಾಗ ಶಂಕರಾಭರಣ, ರೂಪಕತಾಳ.

ಕಂಡೂ ಧನ್ಯನಾದೆ ಉಡುಪಿ ಕೃಷ್ಣನಾ | ಕಣ್ಣಾರೆ ನಾ || ಪಲ್ಲ || ಕಂಡು ಧನ್ಯನಾದೆನೂ ಬ್ರ | ಹ್ಮಾಂಡ ನಖದಿಯೊಡೆದ ಹರಿಯ || ತಂಡತಂಡದಿ ಪೂಜೆಗೊಳುತ | ಪಾಂಡವರನೆ ಸಲಹಿದವನ || ಅನುಪಲ್ಲ || ಗೆಜ್ಜೆ ಕಾಲ ಕಡಗನಿಟ್ಟು | ಮಜ್ಜಿಗೆ ಕಡಗೋಲ ಪಿಡಿದು || ಹೆಜ್ಜೆಪಂಜ್ತೀ ಊಟ ಉಂಡು | ಗುಜ್ಜುವೇಷ ಧರಿಸಿದವನ || ೧ || ಎಂಟು ಮಠದ ಯತಿಗಳು ತನ್ನ | ಬಂಟರೆಂದು ಪೂಜೆಗೊಳುತ || ಕಂಟಕಾ ಕಂಸಾದಿಗಳನೆ | ದಂಟನಂದದಿ ಸೀಳಿದವನ || ೨ || ಏಸುಜನ್ಮದ ಸುಕೃತವೋ ಕಮ | ಲೇಶವಿಠಲರಾಯ ತನ್ನ | ದಾಸಜನರಭಿಲಾಷೆ ಸಲಿಸಿ | ಕೂಸಿನಂದದಿ ಪೋಷಿಸುವನ || ೩ || ಶ್ರೀ ||

೧೪೮. ರಾಗ ಕಾಪಿ, ಏಕತಾಳ.

ಜೋ ಜೋ ಜೋ ಮಲಗೋ | ಮುಕುಂದಾ || ಪಲ್ಲ || ಮುಸುಕು ತೆಗೆಯಬ್ಯಾಡೆಲೊ ಮನೆಗೆಲಸಾ | ಹಸನಾಗದು ಗೋಪಾಲ || ಕೃಷ್ಣ || || ೧ || ಮೆಲ್ಲನೆ ಮಾತನಾಡುವಿಯ ನೋಡುವಿಯಾ | ಸೊಲ್ಲ ಲಾಲಿಸುವಿಯ ಕಂದಾ || ಕೃಷ್ಣ || ೨ || ತೊಟ್ಟಿಲ ತೂಗುತಾ ನಿಂತಿರೆ ಶ್ರೀದ | ವಿಠ್ಠಲಾ ನಿನಗಾನಂದಾ || ಕೃಷ್ಣಾ || ೩ || ಶ್ರೀ ||

## ೧೪೮. ರಾಗ ಕಾಂಬೋಧಿ, ಝಂಪೆತಾಳ.

ಏನು ಕಾರಣ ಮರದೆ ಎಲೆ ಉಡುಪಿನಿಲಯಾ | ಆನೊಬ್ಬ ಜಗಕೊಡೆಯನೆಂಬಹಂಕಾರವೋ || ಪಲ್ಲ || ಶ್ರೀದೇವಿ ಮಡದಿ ಕಮಲೋದ್ಭವನು ಮಗನು ಉ| ಮಾದೇವಿಧವ ಪೌತ್ರ ಸಾಸಿರಫಣಿ|| ಮೋದ ಹಾಸಿಗೆಯೆಂಬ ಪೊನ್ನಬಣ್ಣದ ಹಕ್ಕಿ | ಆದಿವಾಹನ ದನವ ಕಾಯ್ದುದನು ಮರೆತು || || ೧ || ಕ್ಷೇಮಾಮೃತಾಭಯದ ಧಾಮತ್ರಯ ಉಂಟೆಂದು | ಹೇಮಾಂಡ ಕೋಟಿ ಕೋಟಿಗಳು ಯೆನ್ನಾ || ರೋಮಕೂಪಗಳಲ್ಲಿ ವೈಮಾನಿಕಾ ಭಟರು | ಸ್ವಾಮಿ ನೀನೆಂದೆಂಬೊಹಂಕಾರದಲಿ ಮರೆತು || ೨ || ದಿನಕೆ ಕೋಟ್ಯಾಭರಣವಿಟ್ಟು ಪೂಜಿಪ ಪೌಸಿ | ಗಣದ ಸೊಬಗಿನ ಶಿರಿಯೊ ಮದನನೈಯ್ಯ || ಇನಶಶಿಗಳಾನಂತ ಪ್ರಭೆಗೆಲುವ ವೈಬಣ್ಣ | ಘನತೇಯ ಬೆರತ್ಯಜ್ಞ ಬೇಡುಗಳ ಮರೆತು || ೩ || ಮುದ್ದಿಗೆಣೆಯಿಲ್ಲೆನಗೆ ಶುದ್ಧ ಭಾವಿವಿಧಿ | ಮಧ್ವಮುನಿ ಪೂಜಿಸುವ ಉದ್ಧಟದ ಶಿರಿಯೋ || ಹೊದ್ದಿಯಿದಿರಿಲ್ಲೆಂಬ ಬುದ್ಧಿಯಲಿ ಮಾರ್ಮಲೆತು | ಕದ್ದು ಬೆಣ್ಣೆಯ ಮೆದ್ದ ಸುದ್ದಿಯನು ಮರೆತು ||೪|| ಹೋದ ಶ್ರುತಿ ತಂದಮೃತ ಉಣಿಸಿ ಸುರರಿಗೆ ಖಳನ| ತೀಡಿ ಶಿಶುವನು ಪೊರದೆ ಗರ್ವದಿಂದ || ಭೂದೇವಿಯನ್ನಳದೆ ಖಳನೊದ್ದು ಅರಸಾದೆ| ನೀಧ್ಯೇಯ ಧರಿಸಿ ಶಿರಿಪ್ರಸನ್ವೇಂಕಟೆನ್ನ ತುತಿಕೇಳದೆ || ೫ ||

## ೧೪೯. ರಾಗ ಕೇತಾರಗೌಳ, ಝಂಪೆತಾಳ.

ಆವ ಕುಲವಾದರೇನು | ಶ್ರೀವಾಸು | ದೇವನೆಂದವನೆ ಧನ್ಯಾ || ಪಲ್ಲ ||
ಭಗವಂತನಲ್ಲಿ ಭಕುತಿ | ವುಳ್ಳ ಮಾ | ದಿಗನೆ ಉತ್ತಮ ಜಾತಿಯೋ ||
ನಗಧರನ ನೆನೆಯದಿಪ್ಪ | ವಿಪ್ರ ಮಾ | ದಿಗಗಿಂತ ನಿಕೃಷ್ಟವೋ || ೧ ||
ಊರ್ಧ್ವಪುಂಡ್ರಗಳ ಧರಿಸೀ | ಶಿರದಲ್ಲಿ| ಪದ್ಮಾಕ್ಷಿ ತುಲಸಿಮಾಲೆ | ಹಾಕಿ |
ಮಧ್ವವಲ್ಲಭನೆನ್ನದಾ | ಆವಿಪ್ರ | ಶುದ್ಧ ಚಂಡಾಲನೆನ್ನೋ || ೨ ||
ಪಂಚಮುದ್ರೆಗಳ ಧರಿಸೀ | ಲೋಕ ಪ್ರ | ಪಂಚಕ್ಕೆ ದಾಸನೆನಿಸೀ | ಪಂಚ
ಭೇದವು ತಿಳಿಯದಾ | ಆವಿಪ್ರ | ಪಂಚಮಹಾ ಪಾತಕೀಯೋ || ೩ ||
ನಾರದಾನೆಂಬವನನೂ | ಕುಲಧಲ್ಲಿ | ಆರೆಂದು ತಿಳಿಯೊ ನೀನೂ ||

ನಮ್ಮ | ನಾರಾಯಣನ ಸ್ಮರಿಸಲು | ನೀಚ್ಯೋನಿ | ವಿಾರಿ ಸುರಮುನಿಯಾ ದನೋ || ೪ || ವಿದುರ ವಾಲ್ಮಿಕರ ನೋಡೂ | ಅವರ ತುದಿ | ಪೊದಲು ನೀತಿಳಿದು ನೋಡೂ || ನಮ್ಮ | ಮದನನಯ್ಯನ ಭಜಿಸಲು | ಅವರೆಲ್ಲ ಸದಮಲಾರಾದುದರಿಯಾ || ೫ || ಜಾತಿಕಾರಣವಲ್ಲವೋ | ಶ್ರೀಹರಿಗೆ ಭೂತಿಕಾರಣವಲ್ಲವೋ || ಸ್ವಾತಂತ್ರ್ಯವನ್ನು ಮರದು | ಶ್ರೀಹರಿಯು ಪ್ರೀತ್ಯಾಗಲೆನ್ನಬೇಕೋ || ೬ || ಅನ್ಯ ಕರ್ತೃತ್ವ ಮರದು | ಶ್ರೀಹರಿಗೆ ನಿನ್ನ ನಿನ್ನವನೆಂದಡೇ || ತನ್ನ ದಾಸ್ಯವನೆ ಇತ್ತು | ನವ್ಮ ಮೋಹನ್ನವಿಠ್ಠಲ ಸಲಹುವಾ || ೭ || ಶ್ರೀಃ ||

೧೫೦. ರಾಗ ಜುಂಜೂಟಿ, ಛಾಪುತಾಳ.

ಕಾಡಬ್ಯಾಡೊ ಬೇಡಿಕೊಂಬೆನೊ || ಪಲ್ಲ || ಹೀಗೆ ಮನೆಯೊಳು ಹುಡುಗತನವೇನೋ | ಕೂಗುವೆ ಕೇಳಿಲೊ ರಂಗಾ || ೧ || ಹುಡುಗ ಮಡಿಯಲ್ಲಿ ಕಡವೇನೊ ನಾನೀ | ಗಡಿಗೆ ಹೇಗಾದೀತೊ ರಂಗ || ೨ || ವಿಟ್ಟ ಭಾಗ್ಯನಿಧಿವಿಠ್ಠಲ ನೀನು | ತೊಟ್ಟಿಲೊಳ್ ತಾಳಿಲೊ ರಂಗಾ || ೩ ||

|| ಶ್ರೀಮಧ್ವೇಶಾರ್ಪಣಮಸ್ತು ||

೧೫೧. ರಾಗ ಕಾಪಿ, ಆದಿತಾಳ.

ಮದಗಜಗಮನೆ ಈ | ಮಾಯವ ನಾನೊಲ್ಲೆನೇ || ಸುದತಿರನ್ನಳೆ ಸಖಿ | ಸೂರೆಮಾಡಿದನೇನೆ || ಪಲ್ಲ || ತೋರಮುಡಿಯು ಕಂಠ | ಹಾರವು ಸಡಿಲಿದೆ || ಮಾರನಾ ಕೇಳಿಯೊಳು | ಕಾಂತನೊಲಿಸಿದನೋ || ೧ || ಇಂದುಮುಖಿಯೆ ನಿನ್ನ | ಅಧರವು ಕಂದಿದೆ || ಕಂದರ್ಪ ಕೇಳಿಯೊಳು ಮರದೆ ಮುದ್ದು || ೨ || ಶಿರಿಗಾಲಿ ರಂಗನಾ | ಗುಣಗಳನೆಣಿಸಿಸದೆ || ಕರೆಯ ಕಳುಹಿ ನಾನೆ | ಕಾಂತನೊಲಿಸಿದನೇ || ೩ || ಶ್ರೀಃ ||

೧೫೨. ರಾಗ ಪೂರ್ವಿ, ಆದಿತಾಳ.

ದಾವಾಥಾರದಿ ದುರ್ವಿಷಯದಿ ನೀ | ಮುಳುಗಿ ಹರವುತಿದ್ದಿ || ಕೋವಿದರನೆ ಕೇಳೀಜೀವಕೆ ಭಯ | ಆವಾವ ತೆರದೀ || ಪಲ್ಲ || ಕಾಲನ ಮೂತರು

ಕರುಣುಳ್ಳವರೆ | ಹಾಳಾದ ಯಮನೂ || ಭಾಳದೂರ ಹೊರವೆ ರೋಗಗಳಿಂ | ಫೇಳ್ಯಾರೇನಾರೂ | ತಾಳೆಂದರೆ ತಾಳುವರೆ ರವಿಶಶಿ | ಆಳ್ಗಳೆ ನಿನಗವರು | ಜಾಳಕತನವೆ ಶ್ರುತಿಸ್ಮೃತಿಗಳಲಿ | ಪೇಳ್ಯಾವೇನಾರೂ || ೧ || ಮೃತ್ಯುವಿನ್ನ್ಯೊದೆತ್ತಾದರು ಕುತ್ತಿಗೆ ವತ್ತಿ ಬಿಟ್ಟರಂತೋ | ಕರ್ತು ಯಮನ ವ್ಯಾಪಾರ ಹೋಗಿ ಮತ್ತು | ತ್ತಮುವ್ಯಾತಂತೋ | ಇತ್ತಣವಾರ್ತೆಯು ಚಿತ್ತರಗುಪ್ತರು | ಮರ್ತುಬಿಟ್ಟರಂತೋ | ಚಿತ್ತಗೆ ಚಂಚಲ ತಾಟ್ಯಾಡೆಂದು | ಉತ್ತುಮ ಶಾಪ್ವಾತೋ || ೨ || ಇಷ್ಟು ಭವಣೆ ಮುಂದಿಟ್ಟುಕೊಂಡು ನೀ | ಕೆಟ್ಟುಹೋಗಬೇಡಾ | ತಟ್ಟನೆ ಈಭವ ನಷ್ಟವಾಗೊಹಾ | ಗಿಷ್ಟುಮಾಡು ಮೂಢಾ || ಸ್ಪಷ್ಟದಿ ಹೃದಯದಿಷ್ಟತಮನು ಮನಮುಟ್ಟಿ ನೋಡು ಗಾಢಾ | ವಿಠ್ಠಲವ್ಯಾಸನ ದಾಸರ ಗುರು ಪದದಿಷ್ಟವ ಬಿಡಬ್ಯಾಡಾ || ೩ || ಶ್ರೀ ||

೧೫೩. ರಾಗ ಕಾಂಬೋಧಿ, ಝಂಪೆತಾಳ.

ಶ್ರೀವದನ ಕುಮುದಚಂದ್ರಮ ಚಿದಾನಂದಮಯ | ಸೇವಕಪ್ರಿಯ ಕೃಷ್ಣಾ | ದೇವಕೀನಂದನ ಸನಾತನ ಪರಬ್ರಹ್ಮ ದೇವಾದಿದೇವ ಶ್ರೀಕೃಷ್ಣ || ಪಲ್ಲ || ಗೋಕುಲಾರಾಧ್ಯ ಗೋವಿಂದ ನಿತ್ಯಾತ್ಮ ವರ | ಗೋಕುಲ ಸುಗಂಭೀರ ಕೃಷ್ಣ || ಗೋಕುಲಾನಂದಕರ ಬಾಲಭಾಸ್ಕರಕೋಟಿ | ಗೋಕುಲಮಯಾನಂತ ಕೃಷ್ಣ || ೧ || ಹಂಸವಾಹನಜನಕ ಗೌರೀಶನುತ ಪರಮ | ಹಂಸ ನಿರ್ದೋಷ ಶ್ರೀಕೃಷ್ಣ || ಹಂಸಸಂಕುಲ ಮನೋಧ್ಯಾನಗಮ್ಯ ಮುಕುಂದ | ಹಂಸಲೋಚನ ರಾಮಕೃಷ್ಣ || ೨ || ನಾಗೇಂದ್ರಶಯನ ದಾಮೋದರ ಹೃಷೀಕೇಶ | ನಾಗೇಂದ್ರವರದ ಶ್ರೀಕೃಷ್ಣ || ನಾಗಾರಿವಾಹನ ನಿರಾಲಸ್ಯ ವಿಷ್ಣುದ್ರುತ | ನಾಗಾರಿಪದ್ಮ ಶ್ರೀಕೃಷ್ಣ || || ೩ || ಗಾಂಗೇಯ ಚೇಲ ಭೂಷಿತ ಜಗದ್ಧರಿತ ಜಿತ | ಗಾಂಗೇಯಮಿತ್ರ ಶ್ರೀಕೃಷ್ಣ || ಗಾಂಗೇಯ ನುತಿಪಾತ್ರ ಪರಮಪಾವನಗಾತ್ರ | ಗಾಂಗೇಯನಾಥ ಶ್ರೀಕೃಷ್ಣ || ೪ || ಉಡುಪಿಪುರವಾಸ ಸಜ್ಜನಪೋಷಪರಮೇಶ | ಉಡುರಾಜವರದ ಶ್ರೀಕೃಷ್ಣ || ಜಡಜಮಾರ್ಗಣಕೋಟಿ ಲಾವಣ್ಯ ಮಧ್ವಪತಿ | ಕಡಗೋಲ ಪಿಡಿದ ಶ್ರೀಕೃಷ್ಣ || ೫ || ಶ್ರೀ ||

## ೧೫೪. ರಾಗ ಪೂರ್ವಕಲ್ಯಾಣಿ, ಅಟತಾಳ.

ಸಾರಿರೋ ಡಂಗುರವ ನಮ್ಮ | ಭಾರತಿರಮಣ ವಾಯುವೆ ಜಗದ್ಗುರುಯೆಂದು || ಪಲ್ಲ || ಘೋರಿಡುತಿಪ್ಪ ಸಮುದ್ರವ ಲಂಘಿಸಿ | ಧಾರುಣಿಸುತೆಯ ದುಃಖವ ಕಳದು || ಚೋರರಾರಾವಣನೂರಾನಳಗಾಹುತಿಯನಿತ್ತು | ಶ್ರೀರಾಮಗೆರಗಿದಾ ಪ್ರಸಿದ್ಧನೆನುತಲಿ || ೧ || ಕುಶಲದಿ ಕುಂತಿಗೆ ಮಗನಾಗಿ ಭೀಮನೆ | ನಿಸಿ ಆಕೌರವ ಕಪಟದಲಿ ಕೊಟ್ಟ || ವಿಷದ ಕಜ್ಜಾಯವ ತಿಂದು ಜೀರ್ಣಿಸಿಕೊಂಡ | ವಿಷಮುಬಲಾಢ್ಯಮೂರುತಿ ಬದ್ಧವೆಂದು || ೨ || ಕಲಿಯುಗದಲಿ ಮಧ್ಯಗೇಹಾಭಿಧಾನದಿ | ತೌಳವ ಬ್ರಾಹ್ಮಣನಲಿಯವತರಿಸಿ || ಒಲಿದು ಅಚ್ಯುತಪ್ರೇಕ್ಷಾಚಾರ್ಯರ ಕೈಯಲ್ಲಿ |ಚೆಲುವಾಶ್ರಮವಗೊಂಡ ಪೂರ್ಣಪ್ರಜ್ಞತಿಯೆಂದು || ೩ || ಖೂಳ ಸಂಕರ ಕೊಲ್ಲಬೇಕೆಂದು ಕಪಟದಿ | ಕಾಳಾಹಿವೇಷದಿ ಬಂದಿರಲೂ || ಕಾಲಪ್ರಳಯದ ಶಿಡಿಲು ಬಂದೆರಗಿದಂತೆ | ಕಾಲಿಂದ ತುಳಿದಾತನಸುವಗೊಂಡ ಯೆಂದು || ೪ || ಬಳಿಕ ಇಪ್ಪತ್ತೊಂದು ದುರ್ಭಾಷ್ಯಂಗಳ | ಕಳದು ವೇದಾಂತಶಾಸ್ತ್ರಂಗಳಲಿ || ಉಳುಹಿದ ವೈಷ್ಣವಮತವನಿವನೆ ನಮ್ಮ | ಸಲಹುವ ಮಧ್ವೇಶಕೃಷ್ಣ ಪ್ರಿಯನೆ ಯೆಂದು || ೫ || ಶ್ರೀ೩ ||

## ೧೫೫. ರಾಗ ಮೋಹನ, ಅಟತಾಳ.

ತೂಗಿದಳೆ ರಂಗನ | ಯಶೋದೆ | ಸಾಗರಪಾಲ್ಶಯನಾ | ನಾಗದರ್ಪಣ ಬಿಂಕನಾಯಕನಲ್ಲಿಟ್ಟ | ಯೋಗನಿದ್ರೆಗೆ ತಕ್ಕ ಜೋಗುಳ ಪಾಡುತ್ತ || ಪಲ್ಲ || ಸಾಮಗಾಯನಪ್ರಿಯ ಜೋಜೋ ಸಕಲ ಮುನಿ|ಸ್ತೋಮಸನ್ನುತನೆ ಜೋಜೋ || ಆಮಹಾ ನಾರದ ದೇವಗಂಧರ್ವ ಪಾಡೆ | ರಾಮಮೂರುತಿ ರತಿಪತಿಪಿತನೆ ಜೋಜೋ ಯೆಂದು || ೧ || ಅನುಪಮನಂತೆ ಜೋಜೋ ಅನಂತಾದಿ | ಘನಗುಣನಂತೆ ಜೋಜೋ || ವನಜಸಂಭವ ವಾಯು ಪರಮೇಶ ಮೊದಲಾದ | ಅನಿಮಿಷವಂದಿತ ಅನಘ ಜೋಜೋ ಯೆಂದು || ೨ || ಜಠರಂಕಿತ ಖಳ ಜೋಜೋ ಜಲದಲ್ಲಿ | ವಟಪತ್ರಶಯನ ಜೋಜೋ || ಸಾಟಿಯಿಲ್ಲದಲೆ ಬೊಮ್ಮಾಂಡ

ಸೃಜಿಸಿದ ನಮ್ಮ | ಕೂಟದ ಗುರು ಮಧ್ವಪತಿವಿಠಲ ಜೋಜೋ ಯೆಂದು || ೫ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೫೬. ರಾಗ ಪೂರ್ವಿ, ಮಟ್ಟೆತಾಳ.

ಮಧ್ಯರಾತ್ರಿಯೊಳಗೆನಾನು | ನಿದ್ರೆಯೊಳಿರೆ ಬಾಗಿಲನ್ನು | ಸದ್ದುಗಯ್ಯು ವಂಥವರಾರೈ || ಬಾಳ್ವರಿಗಿದು | ಬುದ್ಧಿ ಹೆಣ್ಣೊ ಗಂಡೊ ಪೇಳಿರೈ || ಪಲ್ಲ || ಮೇದಿನಿಯೊಳತಿ ಪ್ರಸಿದ್ಧ | ವಾದ ತುಂಗಮಹಿಮನು ಶ್ರೀ | ಮಾಧವ ಬಂದೇನೆ ಕೇಳಿಲೆ || ಆದರೊಳ್ಳಿತು |ಮದನನಾಡೊಳಾಡಹೋಗೇಲ್ಶೈ || ೧ || ಹೇ ಸಖಿ ವಿಚಾರಮಾಡೆ | ನಾವಸಂತನೆಂದು ಸರ್ವ | ದೇಶ ಬಲ್ಲುದು ನಾನು ಚಕ್ರಿಯು || ಇಲ್ಲ ಬೇಕಿಲ್ಲ | ಆಸಂದಿಯೊಳಿಟ್ಟು ಮಾರ್ಗ್ಹೋಗೈ || ೨ || ಉತ್ತ ಮನೆಂಬವನಲ್ಲೆ ಚಿತ್ತಜಜನಕನೆಂಬ | ಉತ್ತರ ಕೇಳಿಲೆ ಸುಂದರೀ || ಕೇಳಿಲ್ಲಿ ಸರ್ಪ | ಹುತ್ತಿನೊಳು ವಾಸಮಾಡ್ವುದೈ || ೩ || ಸರ್ಪನ ಕೂಡಾಡುತ ವನ ದರ್ಪತಗ್ಗಿಸಿಹೆ ನಾ ಸ | ಮರ್ಪಕಾಯ್ತೆನಿನ್ನ ಮನಕೆ || ಮರದ ಗುಂಡೊಳು | ತಪ್ಪನೆ ಸೇರೋದೆ ಬಹುಲೇಸೈ || ೪ || ಸೂರಿಗಳೆಲ್ಲರು ಯೆನ್ನ | ಶೀರುತಿ ಬಲ್ಲಾವರಿಲ್ಲ | ನಾರಿಮಣಿಯೆ ಹರಿ ಬಂದೇನೆ || ತರುಗಳಲಿ ವಿ | ಹಾರವ ಮಾಡುವದೆ ಲೇಸೇನೈ || ೫ || ತರುಗಳಲ್ಲಿ ಹೋಹಡೆ ವಾ | ನರನೆ ಜನನ ಮರಣ ದೋಷ | ವಿರಹಿತನಾದಾತ ಬಂದೇನೆ || ಈನಾಮಕಿನ್ನು | ತ್ತರವ ಪೇಳಿ ಸುಗುಣನಿಧಿಯೇ || ೬ || ನಾನಮಿಪೆ ನಿನಗೆ ದೇಹ | ಪ್ರಾಣೇಶವಿಠ್ಠಲನೆಂಬರು | ನಾನಾಡಿದಬದ್ಧ ಕ್ಷಮಿಸಯ್ಯ || ತನುವೆ ನಿನ್ನನು | ಮಾನದಿಂದಲೆನ್ನ ಪೊರೆಯಯ್ಯಾ || ೭ || ಶ್ರೀ ||

## ೧೫೭. ರಾಗ ನಾಟಕಾಂಬೋಧಿ, ಆದಿತಾಳ.

ಮಾಮಮ ಕಮಲೆ ಕಾಮದ ಲೀಲೆ | ಸಾಮದ ಜಾಲೆ ಹೈಮ ಸುಶೀಲೆ || ಮನ್ಮಥಜನನಿ ಮಾಧವ ಮಹಿಳೆ | ಮನ್ಮನೋಮೋಹಿನಿ ಮುಕುರಕಪೋಲೆ || ೧ || ಬಾಲಚಂದ್ರೋಪಮ ಭ್ರಾಜಿತಫಾಲೆ |

ನೀಲೋತ್ಪಲ ಪತ್ರಾಂಬಕಲೋಲೆ || ೨ || ಕಾಮುಕದೈತ್ಯ ವಿಭ್ರಾಮಕ ಶೀಲೆ | ರಾಮವಿಠಲ ವರ ಪ್ರೇಮವಿಶಾಲೆ || ೩ || ಶ್ರೀಃ ||

## ೧೫೮. ರಾಗ ಸೌರಾಷ್ಟ್ರ, ಆದಿತಾಳ.

ಒಂದು ಪ್ರಕಾರವೆ ಸ್ವಾಮಿ | ಮುಂದಿಯ ರಕ್ಷಿಸುವದು | ನಿಂದವರ ದೇಹದಲ್ಲಿ | ಹಿಂದೆಮುಂದಾಡುತಲಿದ್ದು || ಪಲ್ಲ || ಅಪಾರಮಹಿಮೆ ಯಿಂದ | ಒಪ್ಪುವ ಹಯಾಸ್ಯನಾಗಿ | ಇಪ್ಪತ್ತೆರಡುಸಾವಿರ | ಇಪ್ಪನಾಡಿ ಗಳೊಳಿದ್ದು || ೧ || ಮುಖನಾಸನೇತ್ರ ಶ್ರೋತ್ರ ತ್ವಕ್ | ನಖೇಂದ್ರಿಯ ತದ್ಗೋಳಕ | ಅಖಿಳಾಪಾಂಗಗಳಲ್ಲಿ | ಮುಖ್ಯನಾಗಿ ಪ್ರೇರಿಸುವಿ || ೨ || ಶ್ವಾಸೋಚ್ಛ್ವಾಸ ಚೇಷ್ಟ ವಿಚಕ್ಷಣ | ಹಾಸವಿಲಾಸ ಭೂಷಣ || ಗ್ರಾಸ ವಾಸಕರಣ ನಿ | ರಾಸನಾಗಿ ಪ್ರೇರಿಸುವ || ೩ || ವಿಶ್ವತೈಜಸ ಪ್ರಾಜ್ಞಾ ತ್ಮಾ | ಶಶ್ವದೇಕ ಪ್ರಕಾರ ಜಾ | ಗ್ರತ್ಸ್ವಪ್ನ ಸುಷುಪ್ತಿಯಲ್ಲಿ | ವಿಶ್ವ ಯೆಲ್ಲ ಪ್ರೇರಿಸುವ || ೪ || ಅನ್ನ ಪ್ರಾಣಮಯದಲ್ಲಿ | ಮನೋವಿಜ್ಞಾ ನಂದಾತ್ಮ || ಸನ್ನುತ ರೂಪಂಗಳಲ್ಲಿ | ಅನಂತರ ಪ್ರೇರಿಸುವಿ || ೫ || ಆತ್ಮರೂಪ ನೀನೆ ಅಂತ | ರಾತ್ಮ ರೂಪನಾಗಿ ಪರ | ಮಾತ್ಮರೂಪನಾಗಿ ಜ್ಞಾ | ನಾತ್ಮನಾಗಿ ಪ್ರೇರಿಸುವ || ೬ || ಪ್ರಾಣಾಪಾನನಾಗಿ ಅ | ಪಾನ ವ್ಯಾನರೂಪಿನಿಂದ | ವ್ಯಾನೋದಾನರೂಪನಾಗಿ ಉ | ದಾನ ಸಮಾನ ನಾಗಿ || ೭ || ಅನಿರುದ್ಧ ಸಂಕರ್ಷಣ | ಘನ್ನ ವಾಸುದೇವನಾಗಿ | ನೆನ ವರ ಪಾಪವುರು | ಷನ್ನ ಪರಿಹರಿಸುವ || ೮ || ಪೂಜಾ ವ್ಯಾಖ್ಯಾನ ಕೀರ್ತನ | ಭೋಜನ ಮಜ್ಜನ ಸುಖ | ಭಾಜನೆಗಳಲ್ಲಿದ್ದು | ಪೂಜ್ಯ ನಾಗಿ ಪ್ರೇರಿಸುವ || ೯ || ಶರೀರ ಸರ್ವಾಯವ | ಧರಿಸಿ ಆವಾವ ಕರ್ಮ | ಪರಿಕಿಸಿ ಪ್ರೇರಿಸೆನ್ನ | ವರಹ ಶ್ರೀಹಯವದನನ್ನ || ೧೦ || ಶ್ರೀಃ ||

## ೧೫೯. ರಾಗ ಮಾಯಾಮಾಳವಗೌಳ, ಏಕತಾಳ.

ಸಾಕಯ್ಯ ಸಾಕು ಸಾಕಯ್ಯ | ನಮಗ್ಯಾಕಯ್ಯ ಇನ್ನವಿವೇಕರ ಸಂ ಗತಿ || ಪಲ್ಲ || ಬುದ್ಧಿಶೂನ್ಯರಿಗೆ ಬುದ್ಧಿಯನ್ಪೇಳಲು | ಮದ್ದಾನೆ ಮೈಯ ತೊಳದಂತಾಯಿತು || ೧ || ದುರುಳ ಜನರಿಗೆ ಧರ್ಮವನೊರೆಯಲು |

ಕುರುಡಗೆ ಕನ್ನಡಿ ತೋರಿದಂತಾದೀತು ‖ ೨ ‖ ಶ್ರೀವವಿಠಲನೆಂದಜ್ಞಾನಿಗೆ ಬೋಧಿಸಿ ಬೋರ್ಗಲ್ಲ ಮುಂದೆ । ವದರಿದಂತಾಯಿತು ‖ ೩ ‖

## ೧೬೦. ರಾಗ ಮೋಹನ, ಝಂಪೆತಾಳ.

ಕೆಲೊಟ್ಟ ಬೀಡಾರದಲಿ ಯಿಷ್ಟುದಿನ ಜೀವಿಸಲಿ । ಕಷ್ಟಪಡಲಾರೆ ಹರಿಯೇ ‖ ಪಲ್ಲ ‖ ಕಟ್ಟುಗಳು ಸಡಿಲಿದವು ಬಳೆಮಣಿ ಕಳಚಿದವು । ನಟ್ಟ ಕಂಬವು ಕುಸಿದುವು ‖ ತೊಟ್ಟಿ ಪಡಸಾಲೆಗಳು ಬಟ್ಟಬಯಲಾದವು । ಕಟ್ಟಿ ಹೊದ್ದಿಸಲಾರೆನೋ ‖ ಕೃಷ್ಣ ‖ ೧ ‖ ಹಾರೆರಡು ಹಾರಿದವು ಹಾರಿಹೋಯಿತು ಹೊದಕೆ । ಜಾರಿಬಿದ್ದವು ಗಳಗಳು ‖ ಆರು ಮೂರೆಂಬ ತಲೆಬಾಗಿಲೆಲ್ಲವು ತೆರದು । ಸೋರುತಿದೆ ಕಂಡಕಡೆಗೆ ‖ ಹರಿಯೇ ‖ ೨ ‖ ಗೇಣೆಂಟು ನಿಚ್ಚಣಿಕೆ ಬಾಣದಾ ನೆಲೆಗಟ್ಟು । ಕ್ಷೋಣಿ ತಲೆಗೋಡ್ಯಾಡುತಾ ‖ ಪ್ರಾಣನಾಯಕನೆ ಸಿರಿಗೋಪಾಲವಿಠ್ಠಲನೆ । ಆನಂದನಿಲಯವಾಸಾ ‖ ಶ್ರೀಶಾ ‖ ೩ ‖

‖ ಶ್ರೀಮಧ್ವೇಶಾರ್ಪಣಮಸ್ತು ‖

## ೧೬೧. ರಾಗ ಕಾಪಿ, ಅಟತಾಳ.

ವೃಂದಾವನದಿ ಗೋವಿಂದನಾಡುವ । ಚಂದವ ಸಂದಣಿ ಸಾಲದು ‖ ‖ ಪಲ್ಲ ‖ ತಳಿರು ತೋರಣದಿಂ ತಂಪಿನ ನೆರಳಾ । ಮಳೆಯಾಗಿ ಸುರಿವ ಮರದ ಜಲಧಿ ‖ ಫಲಭಾರಗಳಿಂ ಸುಖಚಾಟುಗಳಿಂ । ನಳಿನಾಕ್ಷನುಪಚರಿಸಲು ತರುಗಳೆಲ್ಲ ‖ ೧ ‖ ಮುನಿಗಳು ತರುಪಕ್ಷಿ ಮೃಗಂಗಳಾಗಿರೆ । ಸನಕಾದಿಗಳು ಗೋವುಗಳಾಗೆ ‖ ಅನಿಮಿಷರೆಲ್ಲರು ಗೋಪಾಲಕರಾಗೆ । ದನುಜಾಂತಕ ರಂಗ ಮನುಜನಂತಾಗಿರೆ ‖ ೨ ‖ ಅಳಿಗಳು ಗಾನದಿಂದೊಲಿದೊಲಿದಾಡಲು । ಹಲವು ವನದ ದೇವತೆಗಳೆಲ್ಲ ‖ ಚಲುವ ಕುಂಡಲರವ ತಾಳಮೇಳಕೆ ಮೆಚ್ಚಿ । ನಲಿನಲಿದಾಡುವ ನವಿಲಿಗೆ ಹಿಗ್ಗುತ ‖ ೩ ‖ ರಂಗನ ಪದನಖ ತಿಂಗಳಿಗೆ ಒಳ್ಳೆ । ತುಂಗ ಚಂದ್ರಕಾಂತಶಿಲೆ ಸವರೆ ‖ ಹಿಂಗದೆ ಹರಿದು ಕಾಳಿಂದಿನಿ ಕೂಡಲು । ಗಂಗಾ ಯಮುನೆ ಸಂಗಮದಂತಿರೆ ‖ ೪ ‖ ಶಿರಿಯುರಸನ ನಗೆಯೆಂಬ ಚಂದ್ರಿಕೆಗೆ । ಮೆರವ ಕೌಸ್ತುಭದ ಯೆಳೆರವಿಗೆ ‖ ಎರಡು ಕಂಡು ಚಕೋರ ಚಕ್ರವಾಕ । ಇರುಳು ಹಗಲು

ಯೆಂದು ಹೊರಳಾಡುತಲಿರೆ || ೫ || ಹರಿಯ ಕೊಳಲಸ್ವರದತಿಮೋಹ ನಕೆ | ತರುಮೊಗ್ಗುಗಳು ಪುಳಕಿತವಾಗಿ || ಗಿರಿಗಳು ಝುರಿಯ ನೆವ ದಿಂದ | ಕರಗಲು ತೊರೆಗಳು ಸುಳಿಯ ನೆವನದಿ ನಿಲ್ಲಲೂ || ೬ || ಚಿತ್ರ ಜನಯ್ಯನ ವೇಣುನಾದಕೆ ತಲೆ | ಯೆತ್ತದೆ ಕಿವಿಯಿಂದ ಸವಿಯುತಲಿ || ಮತ್ತಾದ ಜಲಧಿಯು ಕಡಲಾಗಿ ನಿಲ್ಲಲು | ಚಿತ್ರಗಳಂತಿಪ್ಪ ತುರುವಿಂಡು ಗಳೆಲ್ಲ || ೭ || ತಳಿಲು ತರಲು ತಮ್ಮ ತಮ್ಮ ಜಾತಿಯಲಿ | ಉಲುಹನ ರಿತು ಕಣ್ಣಮುಚ್ಚಿ ತೆರದು || ನಳಿನನಾಭನ ವೇಣುಸಾರಾಮೃತ ಉಂ ಡು | ಮುಳುಗಿ ಮುನಿಗಳಂತಿಪ್ಪ ಪಕ್ಷಿಗಳೆಲ್ಲ || ೮ || ನಳನಳಿಸುವ ವನ ಮಾಲೆ ಇಂದ್ರಚಾಪ | ಪೊಳವ ಪೊಂಬಟ್ಟೆ ಮಿಂಚು ವೇಣುನಾದ || ಎಳೆ ಯ ಗರ್ಜನೆಯ ಗೋವಳನಾದ ಕೃಷ್ಣನ | ಮಳೆಯಮೇಘವೆಂದು ಚಾ ತಕ ನಲಿಯಲು || ೯ || ಶ್ರೀ ||

## ೧೬೨. ರಾಗ ನಾದನಾಮಕ್ರಿಯೆ, ಏಕತಾಳ.

ಬೇಡುವರೋ ಸುಖ ಬೇಡರು ಕಷ್ಟವ | ಮಾಡಾರು ಅದರ ಉಪಾ ಯವ ಜನ || ಪಲ್ಲ || ಕಿಟ್ಟಾ ತುಳಿದು ಒಮ್ಮಾನ್ನಿಟ್ಟಾ ಬೀಸುವರು | ಕುಟ್ಟಾರು ರಂಗವಲ್ಲಿಯಾ ಜನ || ೧ || ಸಾಲುಸಾಲೆಮ್ಮೆಯ ಸೋಲಾದೆ ತೊಳೆವರು | ಸಾಲಿಗ್ರಾಮಕೆ ನೀರೆರೆಯಾರು || ೨ || ತುಕ್ಕುವರೂರೂರು ಮುಕ್ಕೊಳಿಗೆ ಒಮ್ಮೆ | ಮುಕುಂದನ ಸುತ್ತಿ ನಮಿಸರೋ ಜನ || ೩ || ಬೀಗಾರೂಟಕ್ಕನೇಕ ಭೋಗವು ಜೋಳದ | ಮೋಗರ ಬ್ರಾಹ್ಮರ ಯೆಡೆ ಯೊಳು || ೪ || ಖಮ್ಮನೆ ತುಪ್ಪವು ತಮ್ಮನೆಯವರಿಗೆ | ಕಮ್ಮಟು ದೇವ ಬ್ರಾಹ್ಮರಿಗೆ ಜನ || ೫ || ಇದ್ದ ಪದಾರ್ಥವನ್ನ ಶುದ್ಧಭಕುತಿಯಿಂದ | ಮಧ್ವೇಶಗರ್ಪಿಸಿ ಭುಂಜಿಸರೋಜನ || ೬ || ಕೇಳಿದ್ದು ತಾಮಾಡಿ ಬಿಟ್ಟೆಮ್ಮ ಪ್ರಾಣೇಶ | ವಿಟ್ಠಲನೆಂದು ಮಿಡುಕುವರು ಜನ || ೭ || ಶ್ರೀ ||

## ೧೬೩. ರಾಗ ರೇಗುಪ್ತಿ, ಅಟತಾಳ.

ಧ್ಯಾನವಿದು ಮೌನಿ ಧ್ಯಾನವಿದು || ಪಲ್ಲ || ಮಾನವಗಮೃತದ ಪಾನ ವಿದು || ಅನುಪಲ್ಲ || ಮೆಲ್ಲಾವ ಉಗ್ಗುವ | ಜೊಲ್ಲಾದು ಬಾಯ |

ಪಲ್ಲವಾಧರದೆಡೆಗಲ್ಲ ಛಾಯು | ಚಲ್ವ ಮುಂದಲೆಯಲ್ಲಿ ಅಳಕದ ಸೊಂಪು | ಚಲ್ವಗಂಗಳ ನೋಡುವರಿಗೆ ಇಂಪು || ೧ || ತಿದ್ದಿದ್ದುಬ್ಬುಗಳು ಕಾಮನ ಬಿಲ್ಲ ಮಾಟ | ಸಿದ್ಧ ಬಹಳ ಸುಖವಾರಿಧಿ ಆಟ | ಗದ್ದಾವೆಂಬುದು ಸವಿ ಮುದ್ದಿನ ಗಂಟು | ಮುದ್ದಿನ ಮುಖವು ಮೋಕ್ಷದ ಜನ ನಂಟು || ೨ || ಕೊರಳಲೊಪ್ಪುವ ತ್ರಿರೇಖದ ಸುಂದರ | ಉರದ ವಿಸ್ತಾರ ಶ್ರೀಯಳಿಗೆ ಮಂದಿರ | ಕರಯುಗ ಕರಿಶಾವಕದ ಸೊಂಡಿಲವು | ಕರತಳದಂಗುಲಿ ಪೀಯೂಷಫಲವು || ೩ || ಅತಿಮೃದು ಹೊಳೆವ ತ್ರಿವಳಿಯ ಶೋಭೆಯು | ಸತತ ಗರ್ಭಿತವ ಭುವನನಾಭಿಯು | ಮತಿಗೆ ಮಂಗಳ ಬುಲ್ಲಿ ಕಾಯಿಲಿಂಗಾವು | ಅತುಳವತುಳ ಊರುಜಂಘೆಗಳಿರವು || ೪ || ಶಿರಿಗೆ ಸಿಂಗರವಾದುದರುಣ ಪದಾಬ್ಜ | ಅರಿಧ್ವಜಾಂಕುಶ ವಜ್ರಾಂಕಿತ ಪದಾಂಭೋಜ | ಶರಧಿ ಜಾತನ ಗೆಲ್ವ ಅಂಗುಲಿ ನಖವು | ತರಳನ ನೋಡಿ ನಲಿವಳ ಸುಕೃತವೂ || ೫ || ಅರಳೆಲೆ ತಳಿರನ್ನ ಕುಂಡಲಕರ್ಣ | ಕೊರಳಪದಕಹಾರ ಕೌಸ್ತುಭ ಚಿನ್ನ | ಸರಪಣಿ ಮಣಿಯು ಸುಪ್ಪಾಣಿಯ ಸರವು | ಕರವಲಿ ಉಡುದಾರ ಕಾಲ್ಪೆಂಡೆ ಪ್ರಭೆಯೂ || ೬ || ಘಲು ಘಲು ಘಲುಕೆಂಬ ಅಂದುಗೆ ಗೆಜ್ಜೆ | ಯೆಳೆನೀಲ ಹವಳ ಮುತ್ತಿನ ಬುಲ್ಲಿಗೆಜ್ಜೆ | ಬೆಲೆಯಿಲ್ಲ ದಂಗಕೆ ಬೆಲೆಯುಳ್ಳಾಭರಣ | ನಳಿನನಾಭನ ಲೀಲೆ ಲೋಕಾನುಕರಣಾ || || ೭ || ಥಳಥಳಿಸುವ ಇಂದ್ರನೀಲದ ಬಿಂಬಾ | ಜಲಧಿಶಯನನಂತ ಜೀವದ ಬಿಂಬಾ | ನಳಿನಮುಖಿ ಗೋಪಿ ನೋಡಿ ದಣಿಯಳು | ಲಲಿತ ಶ್ರೀಕೃಷ್ಣ ಲಾವಣ್ಯಾಬ್ಧಿರತಳು || ೮ || ಗೋಪಿಗೋಪನ ಭಾಗ್ಯ ನೋಡಿ ನಿರ್ಜರರು | ಶ್ರೀಪತಿ ಮನದಲಿ ಕೊಂಡಾಡದಿರರು | ಈಪರಿ ಶುಕಮುನಿ ಪೇಳ್ದ ಭೂಪನಿಗೆ | ಶ್ರೀಪ್ರಸನ್ವೇಂಕಟಕೃಷ್ಣಭೂಪತಿಗೆ || ೯ || ಶ್ರೀ ||

## ೧೬೪. ರಾಗ ಸಾವೇರಿ, ಅಟತಾಳ.

ತೆರಳಿಬಾರೈ ಭವಶರಧಿ ತಾರಕನೆ | ನಾ | ಕರವ ಮುಗಿವೆ ಯೆನ್ನ ಕರುಣದಿಂದಲಿ ನೋಡು || ಎರಡುಭಾಗದಿ ಶ್ರೀಧರಣೇರಿಂದೊಪ್ಪುತ | ತ್ವರಿತದಿ ದಯಮಾಡು ಉರಗಾದ್ರಿವೆಂಕಟ || ಪಲ್ಲ || ತೇರಿನೊಳಿಪ್ಪ ಶೃಂಗಾರಪುರುಷನೆ | ಭಂ | ಗಾರ ಮಾಣಿಕದಲಂಕಾರವ ಧರಿಸಿದ ||

ಮಾರಮಣನೆ ವನಜಾರಿವದನ ಬಲು | ಶೂರ ಸಮರ ಧೀರ ನಾರಾ ಯಣ ಕಂ | ಸಾರಿ ಕದನಕಂಠೀರವ ಕಮಲನಾಭ | ನಾರದಮುನಿಪ್ರಿಯ | ಚಾರುಚರಿತ ಪನ್ನ| ಗಾರಿಗಮನ ಮದನಾರಿಯು ಸಲಹಿದ | ಧೀರ ಮು ರಾರಿ || ೧ || ನಿಂದಿರೆ ಬಪ್ಪುದು ಸಿಂಧುಶಯನ ದಯ | ದಿಂದ ಯೆನ್ನನು ನೋಡು ಕಣ್ತೆರದೀಕ್ಷಿಸಿ | ಕಂದಗೊಲಿದು ಕಂಬದಿಂದ ಬಂದಸುರನ | ಕೊಂದು ಕರುಳಹಾರ ಕಂಧರದಿ ತಾಳಿದೆ | ಮುಂದಮತಿ ಇವನೆಂದೆನದಲೆ ಗೋವಿಂದ ಗೋವಳರ | ವೃಂದದೊಡನೆ ಕಾಳಿಂದಿಯು ಧುಮುಕಿ ಫಣೀಂದ್ರನ ಶಿರದಲಿ | ಧಿಂಧಿಮಿ ಧಿಮಿಕೆಂದೆಂದು ಕುಣಿದ ಹರಿ || ೨ || ಜಲದೊಳು ಪೊಕ್ಕು ಆ ಇಳೆಯ ತಸ್ಕರನ ದುಂ | ಬಲ ಗೊಂಡು ಮಡುಹಿ ನಂ | ಬಲು ಪ್ರಹ್ಲಾದ ಹಂಬಲಿಸೆ ಧರ್ಮದಿ ಕ್ಯಾದೆ | ಸಲೆ ಕ್ಷತ್ರಿ ಕುಲವನಳಿದೆ ನಿ | ನ್ನೊಳು ನೀನೆ ಕ್ಯಾದೆ ಮಲತ ಮಾ ವನ ಕೊಂದೆ | ಸಲೆ ತ್ರಿಪುರವ ಗೆದ್ದು ಕಲಿಯ ಸಂಹರಿಸಿದೆ | ಸುಲಭ ಮೂರುತಿ ಮೋಹನವಿಠಲ ತಿರುವೆಂಗಳ || ೩ || ಶ್ರೀಃ ||

## ೧೬೫. ರಾಗ ಧನ್ಯಾಸಿ, ಅಟತಾಳ.

ಗುರುವೇ ನೀ ಕರುಣಿಸದಿರಲುದ್ಧರಿಸುವ | ಧೊರೆಗಳು ಧರೆಯೊಳುಂ ಟೇ || ಕರುಣಾಸಾಗರ ಯೆನ್ನ ಕರದು ಕೈಪಿಡಿದು ನೀ | ಕರುಣಿಸು ಸುಧೀಂದ್ರಕರಜಾತ ರಾಘವೇಂದ್ರ || ಪಲ್ಲ || ತರುಣಿ ತರಳ ಶರೀರ | ಬಂ ಧುಗಳುಪ | ಕರಿಸಲಾದರಿಪರೆಲ್ಲ || ಶರಣರಿಲ್ಲದ ಪಕ್ಕ ಮುರಿದು ಬಿದ್ದ ಗುಬ್ಬಿ | ಮರಿಯಂತೆ ಬಾಯಿಬಿಡು | ತಿರಲು ನೋಳ್ಪರೇ ಸ| ದ್ಗುರುವೇ|| || ೧ || ಕ್ಷಿತಿಯೊಳರ್ಭಕರ ವಾಂಛಿತವಿತ್ತು ಪೊರೆವ ಕೀ | ರುತಿ ಕೇಳಿ ಅತಿ ಶಯದೀ || ಪತಿತಪಾವನನೆಂದು ನುತಿಸಿ ಸಂ | ಸ್ತುತಿಸಿ ತ್ವರಿತ ಬಂದು ಶರಣಾಗತನಾದ ವ್ಯಾಲಿನ್ನು || ೨ || ದಿನಕರ ಕುಲಜಾತನೆನಿಪ ರಾಮರ ಪಾದ | ವನಜಾರಾಧಕನೆನಿಪಾ || ಮುನಿಕುಲೋತ್ತಂಸ ಸಜ್ಜನ ಶಿಖಾ ಮಣಿ ಗುಣ |ಗಣ ಅಭಿನವ ಜನಾರ್ದನವಿಠಲನ ದೂತಾ || ೩ || ಶ್ರೀಃ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೬೬. ರಾಗ ದರ್ಬಾರ್, ಅಟತಾಳ.

ಪಟುತರಾಂಗನೆ ಕರಪುಟದಿ ನಮಿಸುವೆ | ಘಟಿಕಾಚಲ ನಿಲಯಾ || ಪಟಪಟನೆ ಪಲ್ಗಡಿಯುತಸುರರ | ಕಟಹವ ತರಿದಾರ್ಭಟದಿ ಭಕತರ | ಪಟಲ ಪಾಲಿಪ ರಘುವರನ ಪ್ರಿಯ | ಭಟನೆನಿಪ ಮರ್ಕಟಕುಲೋತ್ತಮ || || ಪಲ್ಲ || ವರದಾ ರಾಘವನಾಜ್ಞೆ ಶಿರದಿ ಸ್ವೀಕರಿಸಿ ನಿ | ರ್ಭಯದಿ ವಾರಿಧಿ ಲಂಘಿಸಿ || ದುರುಳ ರಕ್ಕಸರ ಸಂಹರಿಸಿ ರಾಮನ ವಾರ್ತೆ | ಅರುಹಿ ಸೀತೆಗೆ ನಮಿಸೀ || ಪರಿಪರಿ ಚಿತ್ರಮಂದಿರದಿ ಶೋಭಿಪ ಲಂಕಾ | ಪುರವ ಪುಚ್ಛದಿ ದಹಿಸೀ | ಸಂಹರಿಸೀ || ತ್ವರದಿ ದಶಕಂಧರನ ಜೀವನಚರರ ಸಾಹಸ ಗೈದು ತಕ್ಷಣ | ಕರವಿದಾರಣ ಕರುಣನಿಧಿ ಉಂಗುರವ ಸಲಿಸಿದೆ ಕರವ ಜೋಡಿಸೀ || ೧ || ಯದುಪನ ಸೇವಿಸುವದಕೆ ಲಲನೆ ಕುಂತಿ | ಉದರದೊಳಗೆ ಜನಿಸೀ | ಕದನಕೆ ಕರಕಳುಹಿದ ಆಕುರುಕುಲ ಗದೆಯಿಂದ ಬೇರೊರಸೀ || ಮುದದಿ ಮಾಧವನಡಿಪದುಮದಿ ಚರಿಸುವ | ಮಧುಕರನೆಂದೆನಿಸೀ | ನೀಭಜಿಸೀ | ಪದುಮಜಾತನ ಪದವ ಸಾಧಿಸಿ ಮುದದಿ ದ್ವಿರದನ ತೆರದಿ ತಕ್ಷಣ || ಅಧಮ ಕೀಚಕ ಬಕಮುಖಾದಿಗಳ್ವದದು ಸತಿಗತಿ ಮುದವ ತೋರಿದೆ || ೨ || ಗುರುಕುಲೋತ್ತಮನೆ ಭೂಸುರನ ಜಠರದೊಳು | ಮರಳಿ ನೀನವತರಿಸಿ || ಹರಿವಿರೋಧಿಗಳನ್ನು ಮುರಿದಾಶ್ರಮವತಾಳಿ | ಪರಮಗುರುಗಳೆನಿಸೀ || ಗುರು ಇಂದಿರೇಶನ ಪರನೆಂದರುಹಿ ನಿಂದು | ಪರ ಮಾಯಿಗಳ ಜಯಿಸೀ || ಧಿಕ್ಕರಿಸೀ || ಧರಣಿಯೊಳು ಸುಗುಣೇಂದ್ರ ಯತಿಗಳ | ಕರದಿ ಪೂಜಿಪ ಮೂಲರಾಮರ ದರುಶನದಿ ಸುಖಸುರಿಸಿ | ಸರ್ವರ | ಧರೆಯೊಳ್ಪಾಮರ ನರರ ಪಾಲಿಪೆ || ೩ || ಶ್ರೀಃ ||

## ೧೬೭. ರಾಗ ಕಾಂಬೋಧಿ, ಝಂಪೆತಾಳ.

ಕಂದಗೆ ಪೇಳಿದರು ಪುರಂದರದಾಸರು | ತಂದೆ ಹನುಮಗೆ ನೈವೇದ್ಯ ಇಂದು ಕೊಟ್ಟು ಬಾರೆಂದು || ಪಲ್ಲ || ಮಾತಕೇಳುತ ತನ್ನ ಮಾತೆ ಬಳಿಗೆ ಪೋಗಿ | ಪ್ರೀತಿಯಿಂ ನೈವೇದ್ಯ ಬೇಡಿಕೊಂಡು || ಶ್ರೀತುಲಸಿ ಗಂಧಾಕ್ಷತೆಯಿಂದ ಪೂಜಿಸಿ | ವಾತಜಗೆ ಬ್ಯಾತೆರಿಯೊ ತುತ್ತನಿಕ್ಕುವೆನೆಂದು ||

॥ ೧ ॥ ಯೇನು ಮಾಡಿದರು ಬ್ಯಾತೆರೆಯದಿದ್ದರೆ ಯೆನ್ನ । ಪ್ರಾಣವ ತ್ಯಜಿಸುವೆಯೆನುತ ನಿಂದು ॥ ಯೇನು ಕಾರಣ ತಂದೆ ಬಾಯಬಿಡಲು ವಲ್ಲಿ । ನಾಮಾಡಿದಪರಾಧ ಹೇಳು ಹನುಮ ॥ ೨ ॥ ಹೀಗೆನಲು ಆವಾಗ ಬ್ಯಾಗನೆ ಬ್ಯಾತೆರದು ತಾ । ನಾಗಿ ತುತ್ತುಂಡು ತೇಗಿ ನಿಲಲು ॥ ಹೀಗೊಂದುಯೆರಡು ನಾಲ್ಕಾರು ಪೋಗುತ್ತಿರೆ । ಯೋಗಿ ನಾರದರೇವೆ ದಾಸರು ನೋಡಿದರು ॥ ೩ ॥ ಅನ್ನ ಭಕ್ಷ ಪರಮಾನ್ನ ಶಾಕಂಗಳು। ಚನ್ನವಾದ ದಧಿ ಘೃತ ಕ್ಷೀರವೆಲ್ಲ ॥ ಚೆನ್ನಿಗ ನೀನುಂಡ್ಯೋ ಯೇನುಮಾಡಿ ಬಂದೆ ಪ್ರ । ಸನ್ನ ಹನುಮೇಶ ಸತತ ಉಣ್ಣುತಾನೆ ॥ ೪ ॥ ಯೆಲ್ಲಿ ಮಾತು ಇದುಂಟೆ ಕಲ್ಲುಹನುಮುಂಬೋದು । ಯೆಲ್ಲವನು ನಾಬಲ್ಲೆ ನೀನುಂಬೋದಾ ॥ ಇಲ್ಲ ನಿಮ್ಮಾಣೆ ನಾ ಹುಸಿಯಾಡುವನಲ್ಲ । ಅಲ್ಲಿಗೆ ನಡಿಯಿರ್ಕ್ಯೆಲ್ಲ ತೋರಿಸುವೆ ॥ ೫ ॥ ಕಂದನ ನುಡಿ ಕೇಳಿ ಚಂದದಿಂ ಪೋಗಿ ಆ । ನಂದವಾದ ಗುಡಿಯೊಳಗೆ ನಿಲಲೂ ॥ ಗಂಧಾಕ್ಷತೆ ತುಲಸಿಯಿಂದವನ ಪೂಜಿಸಿ । ತಂದೆ ಉಣ್ಣೆಂದರೆ ಉಣಲೊಲ್ಲನಾಗ ॥ ೬ ॥ ಉಣುತಿಯೊ ಇಲ್ಲವ್ಹೊ ಪ್ರಾಣವನು ತ್ಯಜಿಸಲೊ । ಘನಮಹಿಮ ಪೇಳೆಂದು ಪಿಡಿದು ಜಿಹ್ವೆ ॥ ಯನು ಶೆಳೆಯಲಾಕ್ಷಣದಿ ಸತತ ಹನುಮೇಶ । ಅನುಮಾನವಿಲ್ಲದೆ ಬಳಿದುಂಡನಾಗಾ ॥ ೭ ॥ ಈಮಹಿಮೆಯನು ನೋಡಿ ಪ್ರೇಮದಿಂ ಮಗನಪ್ಪಿ । ಸೋಮಶೇಖರನೊಡೆಯನೊಲಿವನಿವಗೇ ॥ ಕಾಮಿತಾರ್ಥವ ನೀವ ಕಲ್ಪತರು ಹನುಮೇಶ । ಭೀಮ ಮಧ್ವರಾಯರ ದಯಾಪಾತ್ರನಾದ ॥ ೮ ॥ ಜಯ ಜಯತು ಜಯ ಹನುಮ । ಜಯ ಜಯತು ಜಯ ಭೀಮ । ಜಯ ಜಯತು ಗುರುಮಧ್ವರಾಯ ಜಯತು ॥ ಜಯ ಜಯತು ಮಧ್ವಪತಿವಿಠಲನ ದಾಸಗೆ । ಜಯತು ಯಂತ್ರೋದ್ಧಾರ ಹನುಮೇಶಗೇ ॥ ೯ ॥ ಶ್ರೀಃ ॥

## ೧೬೮. ರಾಗ ಮಧ್ಯಮಾವತಿ, ಆದಿತಾಳ.

ತೂಗಿ ಲಾಲನೆ ಲಾಲಿಸಿದ್ಯೋ ರಾಮ ತೊಟ್ಟಿಲೊಳ್ಮಲಗಿದ । ನಾಗಾರಿವಾಹನ ನತಜನ ಪ್ರೇಮ ಸುರಸಾರ್ವಭೌಮ ॥ ಯೋಗಿ ಮಧ್ವಮತದಾಗಮವರಿದಿಹ । ಭಾಗವತಾಗ್ರಣಿಯೊ ಗುರುಗಳ ಕೈ ॥ ಪಲ್ಲ ॥

ಪ್ರಳಯಕಾಲದಲಿ ಹರಿ ನೀನೆಂದೂ | ಶ್ರೀಭೂದುರ್ಗಾತ್ಮಕ | ಜಲಜಾಲಾದಲಿ ಕತ್ತಲೆಯೊಳಗಿಂದು || ಯೆಲ್ಲ ಜೀವರ ಪೊಕ್ಕಳಭಾಗದಿ ಯೆಡಬಲದಲಿ ನಡೆತಂದು | ನಿಲಿಸಿ ಆರೂ ಕಾಣಲುಬಾರದ | ಮಲಗಿದ ಫಲವೇನೆಂದು | ದೀನಜನ ಬಂಧು | ಥಳಥಳನೆ ಪೊಳೆವ ಮಣಿಗಳ ತೊಟ್ಟಿಲೋಳ್ | ಲಲನೆ ಸಹಿತ ಬಲುಬಲು ವಿಭವದಲೀ || ೧ || ಗೋಕುಲದಲಿ ಗೋಪಿಯರಿಂದ | ತೂಗಿಸಿಕೊಂಡುದು | ಸಾಕಾಗಲಿಲ್ಲೇನೆಲೆ ಮುಕುಂದ || ಕೌಸಲ್ಯಾದೇವಿಯು | ಸಾಕೆಂದು ಮುದ್ದಿಸಿ ಮೋವಗಳಿಂದ | ಬಗೆಬಗೆ ಬಿನ್ನೈಸಿದ | ವಾಕಾದರು ಸರಿಬರಲಿಲ್ಲೇನೆಂದ | ಆಕಾರಣದಿಂದ | ಯೆಂಕ ಮನಸಿನಿಂದ ಕಲಿಮುನಿಪಗೆ ಬೇಕೆಂದು ಒಲಿದು | ಪರಾಕು ಕೈಕೊಳ್ಳುತ || || ೨ || ಶ್ರುತಿಗೀತೆಯಿಂದ ಸುಂದರವಾದ | ಆಂಭ್ರಾಣಿರೂಪದಲಿ | ಸ್ತುತಿಸಿದುದೆಲ್ಲ ಅತ್ಯಾಗಾಧ | ಅದಕ್ಕಿಂತ ಇವರಲಿ | ಅತಿಶಯವೇನೊ ಪೇಳಲಿ ಮೋದ | ಸತ್ಯಬೋಧಾರ್ಯರ | ಮತಿಮರುಳ್ಯಾದೆಲೆ ಹೇಮಧುಸೂದ | ಪರತರವಾದ | ಪತಿತಪಾವನನೆ ವ್ಯಾಸವಿಠಲ ನೀನೆ | ಗತಿ ಸಮ್ಮತವಾದುದು ಹಿತವೆನುತಲೀ || ೩ || ಶ್ರೀಃ ||

## ೧೬೯. ರಾಗ ಮಧ್ಯಮಾವತಿ, ಅಟತಾಳ.

ಕಲ್ಲು ಒಂದಕ್ಕೆಂಬುವೋ | ದಿಲ್ಲವೊ ಪ್ರಾಣಿ || ಪಲ್ಲ || ಅಲ್ಲೊ ಸುಳ್ಳಲ್ಲೋ ಜಗದೊಳ್ಳಭನಾಣೆ || ಅನುಪಲ್ಲ || ತಿಳಿಯಹೇಳಲು ಬುದ್ಧಿ ತಿಳಿಯದವ ಕಲ್ಲು | ನಳಿನನಾಭನ ಚರಿಯ ತಿಳಿಯದವ ಕಲ್ಲು || ತಿಳಿದು ತಿಳಿದು ದೋಷಕೆಳವವ ಕಲ್ಲು || ೧ || ಹಡದ ತಾಯಿಗೆ ದುಃಖಕೊಡುವವ ಕಲ್ಲು | ಕೊಡಲು ದ್ರವ್ಯಗಳಿದ್ದು ಕೊಡದವ ಕಲ್ಲು || ಬಿಡದೆ ಹರಿನಾಮಾಮೃತವ ಕುಡಿಯದವ ಕಲ್ಲು | ಕಡೆಗೆ ಹಿಡಿದ ಬುದ್ಧಿ ಬಿಡದವ ಕಲ್ಲು || ೨ || ಗುರುಹಿರಿಯರ ಪಾದಕೆರಗದವ ಕಲ್ಲು | ಭರದಿ ಶಾಸ್ತ್ರವನೋದಿ ಮರೆವವ ಕಲ್ಲು || ಹರಿಹರರೊಳು ಭೇದ ತಿಳಿಯದವ ಕಲ್ಲು | ಮರೆವ ಅನಂತಾದ್ರೀಶನ ಕರಿಯ ಕಲ್ಲು || ೩ || ಶ್ರೀಃ ||

## ೧೭೦. ರಾಗ ಕಾಪಿ, ಅಟತಾಳ.

ಚಂದವೇನೇ ಗೋಪಿ ಚಂದವೇನೆ | ನಿನ್ನ ಮಗನ ಮದುಕು | ಚಂದ ವೇನೆ || ಪಲ್ಲ || ಚಂದದಿಂದಲಿ ಅರವಿಂದಾಕ್ಷ ಬೆಣ್ಣೆಯ | ತಿಂದು ಬೇಗದಿ ಕೃಷ್ಣ ಬಂದೋಡಿ ನಿಂತನೆ || ೧ || ಸದ್ದುಮಾಡದೆ ಪಾಲು ಕದ್ದು ನಮ್ಮ ನೆ ಯೊಳ | ಗಿದ್ದ ಸ್ತ್ರೀಯರನೆಲ್ಲ ಮುದ್ದಾಡಿ ಪೋದನೆ || ೨ || ಚೋರನೆ ನಿಸಿಕೊಂಬ ಧೀರ ವೇಂಕಟವಿಠಲ | ವಾರಿಜಾಕ್ಷನ ಪಾದ ಸೇರಿದೆ ನಾ ನೀಗ || ೩ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೭೧. ರಾಗ ಮಧ್ಯಮಾವತಿ, ತ್ರಿಪುಟತಾಳ.

ಕರುಣಿಸೂವದು ಯೆನ್ನಾ | ಕರಿವರದ ಕೇಶವ | ಕರಪಿಡಿದು ಸುಖಪೂ ರ್ಣ | ನಿನ್ನಡಿಗಳಂಬುಜ | ಸ್ಮರಿಪರಲ್ಲಿಡೊ ಮುನ್ನಾ || ಪರಿಹರಿಸು ಬನ್ನಾ || ಸರಸಿಜಾಪತಿ | ಸರಸಿಜೋದ್ಭವ ಹರಸುರಾಧಿಪ ವಂದ್ಯ ನಿನ್ನ ಯ | ಚರಣ ನಂಬಿದೆ | ಯೆರವುಮಾಡದೆ | ತ್ವರಿತ ಸೌಖ್ಯವ | ಗರದು ಕರುಣದಿ || ಪಲ್ಲ || ಜನಸಿ ಜಠರದಲಿಂದಾ | ನಿನ್ನಾಜ್ಞೆಯಲಿ ನಾ | ಜನಿಸಿ ದೆನೋ ಗೋವಿಂದಾ | ಬಾಲತ್ವ ಕೆಲವು | ದಿನ ಕಳೆದೆ ಮುಕುಂದಾ | ಯೌವನವು ಬರುತಲೆ | ವನಿತೆಯರ ಮುಖದಂದಾ || ನೋಡುತಲೆ ಚಂದಾ || ಮನವು ನಿಲ್ಲದೆ ಮಮತೆ ವಿಷಯದಿ | ಮುಣುಗಿ ಸಜ್ಜನ ಗಣಕೆರಗದಲೆ | ದಣಿದೆ ನಾ ದುರ್ಜನರ ಸೇವಿಸಿ | ಕೊನೆಯಗಾಣದೆ ಮಣಿಯದಂಘ್ರಿ ಯ || ವನಜಗಳ ಒಮ್ಯಾರುವೇಂಕಟ | ಘನತೆ ನಿನಗಿದು ತಿಳಿದು ವೇಗದಿ | ಅನುದಿನದಲಿ ಸಲಹುತಿರ್ಪನೆ | ಅನಿಮಿಷರ ಆಧಾರಮೂರುತಿ || ೧ || ಮೊರೆಯ ಲಾಲಿಸು ಜೀಯ | ಆದ ಮರೆಯ ಮಾಡಲು | ಪೊರೆವರಾ ರೆಲೊ ಕಾಯ | ಅನ್ಯರನ ಕಾಣದೆ | ಯೆರಗಿದೆನೊ ಸುರಸಾಹಾಯ | ಸುರ ಧೇನು ಮನೆಯೊಳ | ಗಿರಲು ವಿಠಲರಾಯ || ಬಿಡೊ ನಿನ್ನ ಮಾಯಾ || ಅರಿದು ಚಕ್ರವ ತಳಲು ಜಗದೊಳು | ಯೆರಗುವದೆ ಮನವೆಂದಿಗಾದರು | ಅರಿದು ಅಡಿಕೆಗೆ ಪೋದ ಮಾನವು | ಕರಿಯ ಕೊಡಲದು ಬರುವದುಂಟೇ ||

ಕರುಣಸಾಗರನೆಂಬೊ ನಿನ್ನಯ | ಬಿರುದು ಉಳಿವಕೆ ಒಂದೆ ಸಾಧನ | ಧೊರೆಯೆ ದುಷ್ಕರ ಬಾಧೆ ತಪ್ಪಿಸಿ | ಹರುಷದಲಿ ಮತಿಗರದು ನಿರುತದಿ || || ೨ || ಬಿಡೆನು ಕಡಲಿನೊಳಾಡೆ | ಬಿಂಕದಲಿ ಅದ್ರಿಯ | ನಿಡಲು ಬೆನ್ನಿಲಿ ನೋಡೆ | ಪಾದಗಳ ಎಳವುತ | ನಡದು ಕೋಪವ ಮಾಡೆ | ಬಿಡೆ ದೈನ್ಯ ವಲಿ ಈ | ಪೊಡವಿದಾನವ ಬೇಡೆ || ದ್ವಿಜಕುಲಕೆ ನೀಡೆ || ಬಿಡೆನು ಅಡವಿ ಯೊಳಾಡಿ ಕಾಳಿಯ | ಮಡುವಿನಲಿ ಗಿಡವೇರಿ ಧುಮುಕಲು | ಬಿಡೆನೊ ಅಂಬರ ಬಿಟ್ಟು ಖಡ್ಗವ | ಪಿಡಿದು ವಾಜಿಯನೇರಿ ದನುಜರ || ಕಡಿಯ ಪೋಗಲು ಕಂಡು ನಿನ್ನನು | ಬಿಡೆನೊ ಬಿಡೆನೋ ಯೆಂದಿಗಾವರು | ಪೊಡವಿಪತಿ ಶ್ರೀಶ್ರೀಶವಿಠ್ಠಲ | ಒಡೆಯ ನೀನೆಂತೆಂದು ನಂಬಿದೆ || ೩ ||

## ೧೭೨. ರಾಗ ಕಾಪಿ, ರೂಪಕತಾಳ.

ಆವ ಪುಣ್ಯವೋ | ಗೋಪಿ | ಗಾವ ಭಾಗ್ಯವೋ || ಪಲ್ಲ || ಆವ ಪರಬೊಮ್ಮನಾವ ಆವ ಪರಿಯಲಾಡಿಸುವಳು || ಅನುಪಲ್ಲ || ಮಾರನನ್ನ ಪೆತ್ತನಕು | ಮಾರನೆಂದು ಕರಮು ತನ್ನ | ಮಾರಬೀಸಿ ಬಿಗಿದಪ್ಪಿ ಮೋರೆ ನೋಡಿ ಮೊಲೆಯ ಕೊಡುವ || ಆವ || ೧ || ಕಾಲನಾಗಿ ಜಗವ ತತ್ಕಾಲದಲ್ಲಿ ನುಂಗುವಂಗೆ | ಕಾಲಮೇಲೆ ಮಲಗಿಸಿ ತ್ರಿಕಾಲದಲ್ಲಿ ಪಾಲನೆರವ || ೨ || ನೀತ ಪ್ರಭು ವಿಶ್ವಕರ್ತನೀತನಾಗಿ ಕೈಯ ವಡ್ಡಿ | ನೀತಿ ಹೇಳಿ ನವ ನವನೀತ ವಿತ್ತು ರಂಭಿಸುವ || ೩ || ಆನೆಗೊಲಿದು ಯೆಂಟುದಿಕ್ಕಿನಾನೆಯಾಳ್ದ ಅಪ್ರತಿಮ ದ | ಯಾನಿಧಿಯ ಕುಳ್ಳಿರಿಸಿ ಆನೆ ಬಂತೆಂದಾಡಿಸುವ || ೪ || ತೋಳಿನಿಂದ್ವೈದ್ವೃತ್ತಿರಡು ತೋಳಿನವನ ಕೊಂದವಗೆ | ತೋಳು ತಾಯಿತವ ಕಟ್ಟಿ ತೋಳನ್ನಾಡು ಮಗನೆ ಯೆಂಬ || ೫ || ಆಲಯುದ ಆಲದೆಲೆಯ ಆಲಯಂಗೆ ತೊಟ್ಟಿಲೊಳು | ಯ್ಯಾಲಿಯಿಟ್ಟು ಮುದ್ದುಮಾತನಾಲಿಸಿ ಜೋಗುಳವ ಪಾಡುವ || ೬ || ಮುಷ್ಟವಾದ ಜೀವಜಾಲದಟ್ಟುಳೀ ನಿವಾರಣಂಗೆ | ದಟ್ಟು ದಟ್ಟು ದಟ್ಟೋ ರಂಗ ದಟ್ಟಸಾಲಿನಿಕ್ಕಿಸುವ || ೭ || ಚಿನ್ಮಯಾತ್ಮ ಮುಕ್ತಾಮುಕ್ತ ಚಿನ್ನರಾನಾಡಿಸುವಂಗೆ | ಚಿನ್ನ ತಾ ಹೊನ್ನಗುಬ್ಬಿ ಚಿನ್ನಗುಬ್ಬಿ ಆಡಿಸುವ || ೮ || ದೃಷ್ಟಾದೃಷ್ಟ ದೇಹಿಗಳ

ದೃಷ್ಟಿಯು ನಿಯಾಮಕಂಗೆ । ದೃಷ್ಟಿ ತಾಕಿತೆಂದು ತೆಗದು ದೃಷ್ಟಿಯಿಂದ ತುಷ್ಟಿಬಡುವ ॥ ೯ ॥ ಅನ್ನಮಯನು ಬ್ರಹ್ಮಾದ್ಯರಿಗನ್ನಕಲ್ಪ ನೀನೆ ಪರ । ಮಾನ್ನ ಚಿನ್ನಿಪಾಲು ಕೂಡಿಸ್ಯನ್ನಪ್ರಾಶನ ಮಾಡಿಸುವ ॥ ೧೦ ॥ ಅಂಜಲಿಪುಟದಿ ಸುರರಂಜಿಕೆಯ ಬಿಡಿಸುವ ನಿ । ರಂಜನಗಭ್ಯಂಜನಿಸಿ ಅಂಜಸಿಕ್ಕಿ ಅಮ್ಮಿ ಕೊಡುವ ॥ ೧೧ ॥ ಸಪ್ತಸಪ್ತ ಭುವನಜನಕೆ ಸುಷುಪ್ತಿಯ ತರುವನಿಗೆ । ಸುಪ್ತಿಕಾಲವೆಂದು ತಾನು ಸುಪ್ತಳಾಗಿ ಸ್ತನವ ಕೊಡುವ ॥ ೧೨ ॥ ತಾರಕೋಪದೇಶಕರ್ಗೆ ತಾರಕ ರಂಗನೆನ್ನಲು । ತಾರಕಾಪತಿಯ ತೋರಿ ತಾರಕ್ಕ ಬಿಂದಿಗೆ ಯೆಂಬ ॥ ೧೩ ॥ ನಿತ್ಯತೃಪ್ತ ನಿತ್ಯಾನಂದ ನಿತ್ಯಜ್ಞಾನ ನಿತ್ಯಭೋಗಿ । ನಿತ್ಯತಂತ್ರನೆತ್ತಿಕೊಂಡು ನಿತ್ಯ ಮೂಸಿ ಮುದ್ದಿಸೂವ ॥ ॥ ೧೪ ॥ ತನ್ನ ಮಗನ ನಡೆಯ ನುಡಿಯ ತನ್ನ ಪತಿಗೆ ಹೇಳಿ ಹಿಗ್ಗಿ । ತನ್ನ ಭಾಗ್ಯ ಲಕ್ಷ್ಮೀಶ ಪ್ರಸನ್ನವೇಂಕಟಕೃಷ್ಣ ಯೆಂಬ ॥ಶಾವ ॥ ೧೫ ॥

## ೧೭೩. ರಾಗ ಮುಖಾರಿ, ಝಂಪೆತಾಳ.

ನೋಡಿದರೆ ನೋಡು ಮಾತಾಡು ತಾಯಿಗಳೆಂದು । ನೋಡಿ ಭ್ರಮಿಸಲುಬೇಡ ಪರಸತಿಯರಾ ॥ ಪಲ್ಲ ॥ ದಾರಿಯೊಳು ಭಯವೆಂದು ಚೋರರೊಳಪೋಗುವರೆ । ಗೇರುಬೀಜದ ತೈಲ ಲೇಪಿಸುವರೇ ॥ ಆರಣ್ಯಮಧ್ಯವಲಿ ಮೃಗವಿರಲು ತುರಗವೆಂ । ದೇರುವರೆ ಪರಸತಿಯ ಪಾಪಿ ಮನವೇ ॥ ॥ ೧ ॥ ಹಸಿಯ ಯೆಕ್ಕೆಯಕಾಯಿ ನಸುಗುನ್ನಿ ತುರುಚಿಯನು । ತೃಷೆಗೆ ಮೆಲ್ಲುವರೇನೊ ವ್ಯಸನ ಬಂತೆಂದು ॥ ವಿಷವ ಸೇವಿಸಿದಂತೆ ನೋಡಿಸೀ ಪರಸತಿಯ । ವಿಷಯಕೆಳಸುವದೇಕೆ ಪಾಪಿ ಮನವೇ ॥ ೨ ॥ ಪ್ರೀತಿಯಿಂದಲಿ ಸತಿಯ ಮನೆಗಾಗಿ ಇಂದ್ರನತಿ । ಆತುರದಿ ಪೋಗಿ ಮೈತೂತಾದನೂ ॥ ಸೀತೆಗೋಸುಗವಾಗಿ ರಾವಣನು ತಾ ಕೆಟ್ಟ । ಸೋತು ದ್ರೌಪದಿಗೆ ಕೀಚಕ ಕೆಟ್ಟನೂ ॥ ೩ ॥ ಕೆಟ್ಟವರದೃಷ್ಟವಿನ್ನೆಷ್ಟು ಹೇಳಿದರೇನು । ಬಿಟ್ಟುಬಿಡುವರೆ ತಮ್ಮ ಕೆಟ್ಟ ಗುಣವಾ ॥ ಕಟ್ಟಿನೊಳಗಿಟ್ಟು ಉತ್ಕೃಷ್ಟ ಜನಗಳ ಸಂಗ । ಕೊಟ್ಟು ಸಲಹೋ ಅಚಲಾನಂದ ವಿಠಲಾ ॥ ೪ ॥ ಶ್ರೀ ॥

## ೧೭೪. ರಾಗ ಭೈರವಿ, ಆದಿತಾಳ.

ಬಂದ ಕೃಷ್ಣ ಚಂದದಿಂದ| ಬಂದ ನೋಡೈ | ವೃಂದಾವನಕಾನಂದವೀವ | ಬಂದ ನೋಡೈ || ಪಲ್ಲ || ಪಾಪಾಪೋಪ ಗೋಪರೂಪ | ಬಂದ ನೋಡೈ | ತಾಪಾಲಾಪ ಕೋಪಾಲೀಪ | ಬಂದ ನೋಡೈ || ೧ || ಗೋವಾಮೋವಾ ನೀವದೇವ | ಬಂದ ನೋಡೈ | ದೇವತಾ ವಾದ್ಯಗಳಿಂದ | ಬಂದ ನೋಡೈ || || ೨ || ಭೂಸುರವಾಂಛಿತದಾತ | ಬಂದ ನೋಡೈ ಶ್ರೀ | ವಾಸುದೇವ ವಿಠ್ಠಲ ತಾ | ಬಂದ ನೋಡೈ || ೩ || ಶ್ರೀಃ ||

## ೧೭೫. ರಾಗ ನಾಟಕುರಂಜಿ, ಛಾಪುತಾಳ.

ಹನುಮ ತೇ ನಮೋ | ಭಾರತೀರಮಣ | ಹನುಮ ತೇ ನಮೋ | ಘನ ಮಹಿಮನೆ ಶ್ರೀರಾಮದೂತ ಹನುಮ || ಪಲ್ಲ || ಉದಧಿಯ ಲಂಘಿಸಿ ಮೇದಿನಿಸುತೆಯ | ಮುದದಿ ನೋಡಿ ಬಂದ ಚದುರ ಕಟ್ಟಿಹನುಮ || || ೧ || ದುರುಳ ದುಶ್ಶಾಸನನ ಕರುಳನೇ ಬಗದಾ | ಮರುತಕಾಯ ಸುರ ವರದ ಕಟ್ಟಿ || ೨ || ನರಹರಿ ಶಿರಿಪದಸರಸಿಜಭೃಂಗ | ಪರಮಯೋಗಿ ವೇಣುಪುರವ ಕಟ್ಟಿ | ಹನುಮ ತೇ ನಮೋ || ೩ || ಶ್ರೀಃ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೭೬. ರಾಗ ಭೂಪಾಳಿ, ಝಂಪೆತಾಳ. (ಉದಯರಾಗ)

ಭಾಗೀರಥೀದೇವಿ ಭಯನಿವಾರಣಗಂಗೆ | ಸಾಗರನ ನಿಜರಾಣಿ ಸಕಲ ಕಲ್ಯಾಣೀ || ಪಲ್ಲ || ಒಮ್ಮೆ ಶ್ರೀವಿಷ್ಣುಪಾದದಲಿ ಉದ್ಭವಿಸಿದೇ | ಬ್ರಹ್ಮನ ಕರಪಾತ್ರೆಯಲ್ಲಿ ಬಂದೆ || ಒಮ್ಮೆ ನಾರಾಯಣನ ಪಾದತೀರ್ಥವಾದೀ | ಬ್ರಹ್ಮಾಂಡವೆಲ್ಲ ಪಾವನ್ನವೆಂದೆನಿಸಿದೆ || ೧ || ದೇವಿ ನೀ ವಿಷ್ಣುಪಾದದಲಿ ಉದ್ಭವಿಸಿದೇ | ದೇವತೆಗಳೆಲ್ಲ ನಿಮ್ಮಾಧೀನವೂ || ಶಿವ ಮಹಾದೇವನು ತಲೆಬಾಗಿರಲಾಗಿ ಮಹ | ದೇವಶಿರಸಿನಲಿ ಉದ್ಭವಿಸಿದೇ ಜಗವರಿಯೇ || ೨ || ದೃಷ್ಟಿಸಿ ನೋಡಲು ನೂರುಜನ್ಮದ ಕೃತಪಾಪ | ಮುಟ್ಟಿದರೆ ಮುನ್ನೂರುಜನ್ಮದ ಪಾಪವು || ಮುಟ್ಟಿ ಮಾಡಲು ಒಂದು

ಸ್ನಾನವಮಾತ್ರದಿಂದ | ಸುಟ್ಟುಹೋಗುವದು ಸಹಸ್ರಜನ್ಮದ ಪಾಪ || ೩ || ಜಹ್ನುಋಷಿಯಿಂದಲಿ ಬಿದ್ದಕಾರಣದಿಂದ | ಜಾಹ್ನವೀ ಯೆಂತೆಂದು ನೀ ಕರೆಸಿಕೊಂಡೇ || ಮುನ್ನ ನರಕಾಸುರನ ಸಗರರಾಯನ ವಂಶ | ವನ್ನು ನೀ ಪಿಂತೆ ಪಾವನಮಾಡಬಂದೆ || ೧ || ವಿಸ್ತಾರದಲಿ ಪೊಳೆವ ಮುತ್ತಿನಾ ಸರಗಳು | ಮತ್ತೆ ರಂಗಯ್ಯ ಪವಡಿಸಿದ ನೋಡೀ || ಮಿತ್ರೆ ಮಹಾಲಕ್ಷ್ಮಿ ಯು ಉರಸ್ಥಳದಲಿರಲಾಗಿ | ಇತ್ತ ಶ್ರೀಶ್ರೀದವಿಠ್ಠಲನರಸಿ ಬಂದೆ || ೫ ||

## ೧೭೭. ರಾಗ ಆನಂದಭೈರವಿ, ಆದಿತಾಳ.

ಬಂದದೆಲ್ಲ ಬರಲಿ | ರಾಘ | ವೇಂದ್ರರ ದಯವೊಂದಿರಲಿ || ಪಲ್ಲ || ಹಿಂದೆ ಬಹುಜನುಮದಿಂದ ಮಾಡಿದಘ | ಸಂದಣಿ ಕಳೆವಗಿದೊಂದರಿದೇನೈ || || ಅನುಪಲ್ಲ || ದಾಶರಥಿ ವೇದವ್ಯಾಸ | ನರ | ಕೇಸರಿ ಶ್ರೀಯಾದವೇಶ | ಈಸುಮೂರ್ತಿಗಳುಪಾಸಾ | ನೆಯ ಲೇ | ಸಾಗಿ ಮಾಳ್ಪ ವಿಶೇಷ || ದಾಸಜನರ ಅಭಿಲಾಷೆ ಪೂರ್ತಿಸುವ | ಶ್ರೀಸುಧೀಂದ್ರಜ ಯತೀಶನ ದಯವಿರೆ || ೧ || ಧರೆ ತಾವ್ ಕಳಕೊಂಡವರು | ಉಡ | ಲರುವೆ ಇಲ್ಲದವರು | ತರಳಸಂಪದ ರಾಹಿತರು | ಮಹ | ದುರುತರ ಜ್ಞಾನಿ ಭಕತರು || ತೆರಳಿಬಂದು ಸಂದರು ಶನಮಾಡಲು | ಕರದೀಪ್ಸಿತ ಕೊಡುವರ ದಯವಿರುತಿರೆ || ೨ || ವಾತ ಪಿತ್ತ ಕಫ ಶೀತಾ | ಸನ್ನಿ | ಪಾತಕಜ್ವರ ಪ್ರಖ್ಯಾತ | ಭೂತಪ್ರೇತ ಭಯವ್ರಾತಾ | ಕಳೆ | ವಾತುರರಿಗೆ ಫಲದಾತಾ || ನಾಥ ಅಭಿನವಜನಾರ್ದನವಿಠಲನ | ಪ್ರೀತಿದೂತನ ದಯ ಅತಿಶಯವಾಗಿರೆ || ೩ || ಶ್ರೀ || 

## ೧೭೮. ರಾಗ ನಾದನಾಟಿ, ಝಂಪೆತಾಳ.

ರುದ್ರ ಸತ್ಕರುಣಾಸಮುದ್ರ ಮೊರೆಯನುಹೊಕ್ಕೆ | ಕ್ಷುದ್ರ ಭಯಹರ ಶಿವಶಿವ ತ್ರಕ್ಷ ಸಲಹೆನ್ನ || ಪಲ್ಲ || ಅಪರಾಧಿ ನಾನಯ್ಯ ಕೃಪಣ ವತ್ಸಲ ಗುರುವೆ | ಶಪಥದಿ ಶರಣಜನಪಾಲ ಸಿದ್ಧಾ || ನಿಪುಣತನದಲಿ ನಿನಗೆ ಸಮುಗಾಣೆ ಹರಿಭಕುತಿ | ಕೃಪೆಮಾಡೊ ಮನದಿ ನಿಸ್ಸೀಮ ತತ್ವೇಶಾ || || ೧ || ರಾಮಜಪ ಧ್ಯಾನ ಸನ್ನೇಮ ಸಾರುವಭೌಮ | ಸೋಮಶೇಖರ ಗುಪಿತಮಹಿಮ ವಿಷ್ಣು || ನಾಮ ಸುಧೆಯನು ಉಣಿಸಿ ಭ್ರಾಮಕವ ಬಿಡಿಸಿ

ನಿಜ | ಸ್ತೋಮದೊಳಗಿಡು ಎನ್ನ ಕರುಣಿಸು ಪ್ರಸನ್ನ || ೨ || ವೈಷ್ಣವೋತ್ತಮನೆ ನೀವೊಲಿಯದಲೆ ಮನಶುದ್ಧಿ| ಪುಟ್ಟದೊ ಸುಜ್ಞಾನಭಕುತೀರತಿ|| ಉಷ್ಣಶೀತಳವು ಸಮ ವೈರಾಗ್ಯನಿಧಿ ನೆನವ | ರಿಷ್ಟಾರ್ಥದಾತ ಸುತ್ರಾಮ ಸ್ತುತಿ ನಿರತಾ || ೩ || ದಿತಿಜಮರ್ದನನೆ ನೀ ದಿವಿಜರನಿಯಾಮಕನೆ | ಮತಿಯ ನಿರ್ಮಲ ಮಾಡು ಮಹದೇವನೇ || ಅತಿದಯಾಂಬುಧಿ ಆದ ಕಾರಣದಿ ಬಿನ್ನೈಪೆ | ಹೃತ್ಸರೋವರದಿ ಹರಿಧ್ಯಾನ ನೀಡೋ || ೪ || ಪವಮಾನ ಪ್ರತಿಬಿಂಬ ಪಾರ್ವತೀಪತಿ ಗುರುವೆ | ಭವಹರನೆ ಸೌಭಾಗ್ಯ ದಾತನೀತಾ || ಪವನನುತ ಧನ್ವಂತ್ರಿವಿಠ್ಠಲನ ಚರಣಾಬ್ಜ | ನವವಿಧದಿ ಸೇವಿಸುವ ಜ್ಞಾನ ನೀಡೋ || ೫ || ಶ್ರೀ ||

## ೧೭೯. ರಾಗ ಅಸಾವೇರಿ, ತ್ರಿಪುಟತಾಳ.

ರುದ್ರಾಂತರ್ಗತ ಶ್ರೀಸಂಕರ್ಷಣ| ಮಹ| ಹೃದ್ರೋಗ ಪರಿಹಾರಕರಣ || ಕದ್ರುವಸುತ ಕಂಠಮಾಲಾ ಜಟಾಧಾರ | ಸದ್ರಾಮಜಪಶೀಲಾ ಸತತ ಗಂಗಾಧರಾ || ಭದ್ರಗತಿಪ್ರದ ಭವವಿಮೋಚನ | ಮುದ್ರಧರ ಜನಪಾಲ ಗುರುವರ || ಅದ್ರಿಸುತೆಪತಿ ಅಮರಶ್ರೇಷ್ಠನೆ | ಸದ್ರತಿಯ ಹರಿಭಕುತಿ ಯಲಿ ಕೊಡು || ಪಲ್ಲ || ಭಕ್ತಜನರ ಪರಿಪಾಲಾ | ಪಾಹಿ | ಶಕ್ತಸುಗುಣ ಸಲ್ಲೋಲಾ | ಯುಕ್ತಾಪರ್ಣಗ ವಿಮಲಚರಿತ | ಬಿಡದೆ ನಿತ್ಯ ಭಜಿಪ ವಿಷ್ನು ದಾಸಾ | ವ್ಯಕ್ತಮಹಿಮ ಮಹಮಂದಜನೋದ್ಧಾರ || ಮುಕ್ತಜನರಾಶ್ರ ಯನೆ ಮನದಾ | ಸಕ್ತಿಯನು ಪೂರೈಸಿ ಸರ್ವದಾ | ಭಕ್ತಿಭೋಗಾದಿಗಳ ಸಲಿಸಿ ವಿ | ರಕ್ತಿವಿಷಯದಿ ಕೊಡುವ ಕರುಣಿಯೇ || ೧ || ಘೋರದುರಿತ ಪರಿಹಾರಾ ನಿನ್ನ | ಸೇರಿದವರ ರಕ್ಷೋದಾರಾ || ಮಾರಾರಿ ಮುನಿಗಣ ಸೇವ್ಯ ಸನ್ಮೋಹನ | ದಾರಿದ್ರವಿನಾಶನ ಅಖಿಳಸಂಪದದಾತಾ || ಚಾರು ಕರುಣವ ತೋರೋ ನಿನ್ನನು | ಸಾರಿ ಬೇಡುವೆ ಸೌಖ್ಯಕರ ವರ | ಭಾರಿ ಭಾರಿಗೆ ನುಡಿಸಲಾಗದು | ಮೂರುಜಗದೊಳು ಮೆರವ ಖ್ಯಾತನೆ || ೨ || ದೋಷಾಗಳೆಣಿಸದೇ ನೀನೂ | ಸರ್ವದ ಯೆನ್ನ | ಪೋಷಿಸುವದು ಸುರ ಧೇನೂ || ಶ್ರೀಶಾಪಾದದಿ ಭಕ್ತಿ ಶಾಶ್ವತವನುಯಿತ್ತು | ದಾಸದಾಸನೆಂದು ನೀ ಸಲಹಲುಬೇಕು || ಕ್ಲೇಶನಾಶನ ಕಾಮಿತಪ್ರದ | ಭೂಸುರಗಣಸೇವ್ಯ

ಮನ್ಮನೋ | ವಾಸ ಧನ್ವಂತ್ರಿವಿಠಲನ ನಿಜ | ದಾಸಾ ತೃಣಬಿಂದ್ವರ್ಚಿತ ನವನೋ || ೩ || ಶ್ರೀ ||

೧೮೦. ರಾಗ ಕರಹರಪ್ರಿಯ, ಝಾಪುತಾಳ.

ಹ್ಯಾಗಾದರು ನಾ ಬಿಡೆ ಕರದೊಯ್ಯೊ | ರಾಧಾಶ್ರೀರಂಗನೆ ನೀನ್ಯಾಗಾದರು || ಪಲ್ಲ || ಹವಣಿಸಿ ನೋಡೆ ಬಂದೆನೆಂಬೊ | ತವ ವದನಾಂಬುಜಭೃಂಗನಾ || ೧ || ಮುಖಮುಖ ನಿನ್ನನೆ ನೋಡುವನಿದಕೋ | ಪ್ರಕಟಿತ ಕರುಣಸಾಗರಾ || ೨ || ತೊಟ್ಟಿಲೊಳಗೆ ತರಹರಿಸನು ಶ್ರೀದ | ವಿಠ್ಠಲ ದೇವೋತ್ತುಂಗನೇ || ೩ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

೧೮೧. ರಾಗ ನವರೋಜು, ಮಿಶ್ರಝಾಪುತಾಳ.

ಬರುವೆಯೋ ರಂಗಯ್ಯಾ | ಮನೆಗೆ | ಬಾರೋ ಹೋಗುವ || ಪಲ್ಲ || ಬೊಗರಿ ಚೆಂಡುಗಳ ಕೊಡುವೆನು ಬಂದರೆ | ಬಗೆಬಗೆ ಆಟವ ಕಲಿಸಿ ಒಲಿಸುವೆನು || ೧ || ರಸರಸಾಯನಗಳುಣ್ಣಿಸುವೆ ಬಂದರೆ | ಮುಸುಕಿನೊಳಗೆ ಬಚ್ಚಿಟ್ಟುಕೊಂಬುವೆನು || ೨ || ಶ್ರೀದವಿಠ್ಠಲನೆ ಬಂದರೆ ನಿನಗೆ | ಸಾದರದಲಿ ಸವಿಮಾತನ್ಹೇಳುವೆನು || ೩ || ಶ್ರೀ ||

೧೮೨. ರಾಗ ಧನ್ಯಾಸಿ, ಅಟತಾಳ.

ಅರ್ಚನೆ ಬಗೆ ಕೇಳಿ ಲೋಕ | ಕಣ್ಣು | ಮುಚ್ಚಿ ಕುಳಿತರೆ ಹರಿ ಕೊಡಲೋಕ || ಪಲ್ಲ || ಜಡವ ಪೂಜಿಸಿದರಲ್ಲೇನು | ತಾನು | ಜಡತುಲ್ಯನಾಗಿದ್ದುದಕೆ ಸಮವೆನ್ನು || ಕೆಡದಿರೊ ಇದರೊಳಗಿನ್ನು | ತಿಳಿ | ಒಡನೆ ಕರ್ಮಂಗಳಲ್ಲೇನುಂಟು ಕಾಣೋ || ೧ || ತ್ರಿವಿಧಜೀವರು ಮಾಡುವಂಥ | ನಡತೆ | ಹರಣವ ನೋಡೋಡು ಬಿಡು ನಿನ್ನ ಪಂಥಾ || ಕವಿಗಳ ಒಡನೆ ಸುಪಂಥ | ದಿಂದ | ಪವನಮತವ ಪೊಂದಿ ಭಜಿಪುದು ಇಂಥಾ || ೨ || ಯೇಕಾಂತದಲಿ ನಿನ್ನ ಮನಸು | ಅ | ನೇಕವಾಗುವದು ನಿರಂತರ

ಯೆಣಿಸು || ನೀಕೇಳು ಯೋಚಿಸಿಗುಣಿಸು | ಸರ್ವ | ಆಕಾರದಲಿ ಶ್ರೀಹರಿಯು ನೆನೆ ನೀನು || ೩ || ದ್ವ್ಯಣಕವಿಡಿದು ಮಹಕಾಲ | ತನಕ | ಯೆಣಿಕೆ ಮಾಡುತಲಿರು ನಿತ್ಯ ಸುಶೀಲ || ಗುಣವಂತನಾಗು ನೀ ಬಹಳ | ಸುಖ | ವನಧಿರಂಗನ ವ್ಯಾಪಾರೆನ್ನೋ ಬಾಲಾ || ೪ || ಆವಾಗು ಮರಿಯದೆ ಹರಿಯ | ಕಂಡ | ಠಾವಿನಲ್ಯೋಚಿಸು ಅರೆಘಳಿಗೆಯರಿಯ || ದೇವಾ ವಿಜಯವಿಠ್ಠಲ ಧೊರೆಯಾ | ನಿನ್ನ | ಭಾಗ್ಯದಲ್ಲಿ ತಿಳಿ ಆತನ್ನ ಚರಿಯಾ || ೫ ||

೧೮೩. ರಾಗ ಪೂರ್ವಿ, ಅಟತಾಳ.

ಆತ್ಮನಿವೇದನ ಭಕುತಿ | ತ | ನ್ನಾತ್ಮವನೀವ ಸರ್ವಾತ್ಮ ವಿಶ್ವಾತ್ಮಾ || || ಪಲ್ಲ || ಸರ್ವಕರ್ಮಕರ್ತ ಸರ್ವಕಾರಕ ಹರಿ | ಸರ್ವಕಾರ್ಯಕೆ ಹರಿ ಸ್ವತಂತ್ರನೂ || ಸರ್ವಾರ್ಥದಲಿ ಪೂರ್ಣ ಸರ್ವೇಂದ್ರಿಯ ನಿಯಂತ | ಸರ್ವದೇಶ ಕಾಲವ್ಯಾಪ್ತ ಗೋಪ್ತನೆಂದು || ೧ || ಕಾಸುಕೋಶ ಗೇಹ ದೇಹೇಂದ್ರಿಯ ಪ್ರಾಣ | ಸ್ತ್ರೀಸುತ ಪ್ರಿಯ ದಾಸೀದಾಸರನು || ಈಶಗರ್ಪಣೆಮಾಡಿ ದಾಸದಾಸನಾಗಿ | ಲೇಶಾತ್ಮೀಯುವೆನ್ನದಂತರ್ಪಿಸುವದು || ೨ || ಜನ್ಮಜನ್ಮಾಂತರ ಧರ್ಮ ಕರ್ಮಂಗಳು | ನಿರ್ಮಲಜ್ಞಾನ ವೈರಾಗ್ಯ ಭಕ್ತಿ || ಸ್ವರ್ಮಂದಿರ ಭವಯಾತ್ರೆ ಗರ್ಭಯಾತ್ರೆ | ರಮ್ಮೆಯ ರಮಣ ಗರ್ಪಣೆ ಯೆನ್ನಿಷ್ಟೆ || ೩ || ಅಹರ್ನಿಶ ಶ್ವಾಸೋಚ್ಛ್ವಾಸವಸ್ಥಾತ್ರಯ | ಬಹು ಜಪತಪ ವ್ರತಾರ್ಚನೆ ಸಂಭ್ರಮಾ || ಬಹುಭೀಶ್ರವಣ ಬಹುಧಾಶ್ರವಣ ಮನನ | ಶ್ರೀಹರಿಯ ಧ್ಯಾನ ಧ್ಯಾಸಾತ್ಮೀಯಾರ್ಥದಿ || || ೪ || ಅಲಸಬುದ್ಧಿಯ ಬಿಟ್ಟು ಅಲಸಮತಿಯ ಬಿಟ್ಟು | ಅಲಸಲಕ್ಷಣ ವಿಸ್ಮೃತಿಯ ನೀಗಿ || ಅಲವಬೋಧಾಚಾರ್ಯಮತದವರನೆ ಪೊಂದಿ | ಲಲಿತ ಪ್ರಸನ್ನವೇಂಕಟ ಚತುರಾತ್ಮನಿ || ಗಾತ್ಮನಿವೇದನ || ೫ || ಶ್ರೀ ||

೧೮೪. ರಾಗ ಧನ್ಯಾಸಿ, ಝಂಪೆತಾಳ.

ಮರೆಯದಿರು ಮನವೆ ಮಾಧವನ | ನಮ್ಮ | ದುರಿತ ದಾರಿದ್ರ್ಯ ಪರಿಹರಿಸಿ ಪೊರೆವವನ || ಪಲ್ಲ || ಅಳರಿತು ಜೀತವನು ಕೊಡುವಂತೆ ಕೊಂಡಾಡು | ಮೇಲಾಗಿ ಜೀತವ ಕೊಡುವ ದೇವನ್ನ || ಕಾಲಕಾಲಕೆ ಮಾಳ್ಪ

ನಡೆತಪ್ಪ ನುಡಿತಪ್ಪ | ಆಲೋಚಿಸದಲೆ ಕರುಣಿಸುವ ಕರುಣನ್ನ ||೧|| ಮೂಢನಾಗಲಿ ಮತಿಯು ಉಳ್ಳ ನರನಾಗಲಿ | ಪಾಡಿದಾಕ್ಷಣ ತನ್ನ ಭೃತ್ಯನೆಂದು || ಕೂಡಿಕೊಂಬುವ ಘೋರಿಗಳಿಲ್ಲ ಹರಿಯಲ್ಲದಲೆ | ನಾಡೊಳಗೆ ಬಣಗು ದೈವಗಳ ನೀ ಬೇಡೀ ||೨|| ಮುನ್ನಾರು ಅನ್ಯದೇವರ ಭಜಿಸಿ ಭವಗೆದ್ದ | ರಿನ್ನ್ಯಾರು ಹರಿಯೊಲುಮೆಯಲಿ ದಣಿದರು || ನಿನ್ನ ಹಿತಕರ ಗುರುಗಳಿಂದರಿತು ನಂಬು ಪ್ರ | ಸನ್ನವೇಂಕಟಪತಿಯ ಪಾದಕಮಲವನು || ೩ || ಶ್ರೀಃ ||

## ೧೮೫. ರಾಗ ವರಾಳಿ, ಅಟತಾಳ.

ಸೂರ್ಯಾಂತರ್ಗತ ನಾರಾಯಣ | ಪಾಹಿ | ಆರ್ಯಮೂರುತಿ ಪಂಚಪ್ರಾಣ || ಪಲ್ಲ || ಭಾರ್ಯೆಳಿಂದೊಡಗೂಡಿ ಸರ್ವಜೀವದೊಳಿದ್ದು | ವೀರ್ಯಕೊಡುತಲೀರ್ದ ಶರ್ವಾದಿಗಳ ವಂದ್ಯ || ಅನುಪಲ್ಲ || ದ್ರುಪದನಸುತೆ ನಿನ್ನ ಕರೆಯೇ | ಅಂದು | ಕೃಪಣವತ್ಸಲ ಶೀರೆಮಳೆಯೆ || ಅಪರಿಮಿತವು ನೀನು ಗರೆಯೇ | ಸ್ವಾಮಿ | ಕುಪಿತ ದೈತ್ಯರ ಗರ್ವ ಮುರಿಯೇ || ಜಪಿಸೊ ಜನಗಳ ವಿಪತ್ತ ಕಳದೆ | ಈಪರಿ ದೇವರನೆಲ್ಲು ಕಾಣೆನು || ತಪನಕೋಟಿ ಪ್ರಕಾಶಜಾಲವುಳ್ಳ | ಕಪಿಲರೂಪನೆ ಜ್ಞಾನದಾಯಕ ನೀನೆ || ||೧|| ಹೃದಯ ಮಂಟಪದೊಳಗೆಲ್ಲ | ಪ್ರಾಣ | ದದುಭುತಮಹಿಮೆಯ ಬಲ್ಲ || ಸದಮಲನಾಗಿ ತಾನೆಲ್ಲ | ಕಾರ್ಯ | ಮುದದಿ ಮಾಡಿಸುವ ಶ್ರೀನಲ್ಲ || ಹದುಲ ಕೊಡುತಲೆನ್ನ ಬದಿಲಿ ತಾನಿದ್ದು | ವದಗಿ ನಿನಗೆನ್ನ ಮದುವೆಯ ಮಾಡಿದ|| ಪದುಮಜಾಂಡೋದರನೆ ಈಸುದತಿಯ | ಮುದದಿ ರಮಿಸು ಎಂದು | ವದಗಿಲಿ ಬೇಡುವೆ || ೨ || ಎನ್ನ ಬಿನ್ನಪವನ್ನು ಕೇಳೊ | ಪ್ರಿಯ | ಮನ್ನಿಸಿ ನೋಡೊ ದಯಾಳೊ || ಹೆಣ್ಣಬಲೆಯ ಮಾತ ಕೇಳೊ | ನಾನು | ನಿನ್ನವಳಲ್ಲವೇನ್ಹೇಳೊ || ನಿನ್ನ ಮನದನು ಮಾನವ ತಿಳಿಯಿತು| ಕನ್ಯಾವಸ್ಥೆಯು ಯೆನ್ನದೆನ್ನದೆ || ಚನ್ನ ಶ್ರೀನಿಧಿ ವಿಠಲರೇಯನೇ | ಕನ್ಯೆಪ್ರಾಯದವಳನ್ನೆ ಕೂಡಿಕೋ || ೩ || ಶ್ರೀಃ ||

|| ಶ್ರೀಮಧ್ವೇಶಾರ್ಪಣಮಸ್ತು ||

## ೧೮೬. ರಾಗ ಕೇತಾರ, ಅಟತಾಳ.

ತಾವೆಲ್ಲಿ ನೆನೆಯಲು ದಶಮತಿಗುರುಗಳ | ತಾವಲ್ಲಿ ಸುಖಿಗಳು ಸುಲಭದಿಂದಾ || ಪಲ್ಲ || ಕೂರುಮರ ಮಣಿಯು ನೆನೆಯೆ ಕೂಸುಗಳಿನ್ನು | ಪೂರವೆ ಮನದೊಳಗಾಗುವಂತೆ || ತಾರರಮಣನು ತಾ ಮೇಲೆ ಉದಿಸಲು | ವಾರಿಧಿ ಹರುಷದಿ ಉಕ್ಕುವಂತೆ || ೧ || ತರಣಿಕಿರಣ ಪಸರಿಸೆ ಸರೋವರದಲ್ಲಿ | ಸರಸಿಜ ವಿಕಸಿತವಾಗುವಂತೆ || ವಾರಿದ ಮೇಲಿರೆ ತಾ ನೋಡಿ ಮಯೂರ | ಮೀರಿ ಕುಣಿಕುಣಿದಾಡುವಂತೆ || ೨ || ವ್ಯಾಸದೇವರ ಕೂಡ ಮಾತುಗಳಾಡುವಾಗ | ಲೇಸು ಶಿಷ್ಯರಿಗೆನ್ನ ಶುಭ ನಮಗೆ || ವಾಸುದೇವವಿಠಲ ಪಾಶಾದಿಂದಾಡುವಾಗ | ವಾಸಗಕ್ಷಯವೆನ್ನೆ ಕೃಷ್ಣಿಯಂತೆ || ೩ || ಶ್ರೀಃ ||

## ೧೮೭. ರಾಗ ಅಠಾಣ, ರೂಪಕತಾಳ.

ಬಂದನೇನೆಲೇ | ಕೃಷ್ಣಾ | ಬಂದನೇನೆಲೇ || ಪಲ್ಲ || ಬಂದು ದಯದಲಿಂದು ಪೊರೆಯ | ಲೆಂದಿಗಾದರಿಲ್ಲಿ ಮಧುಪ || ಅನುಪಲ್ಲ || ತರುಣ ಅರುಣವರ್ಣವುಳ್ಳ | ಚರಣಯುಗ ತ್ರಿಕರಣದಲಿ || ಸ್ಮರಣೆಮಾಡಿ ಶರಣುಪೊಕ್ಕ | ತರುಣಿಜನರ ಕರುಣಿಪುದಕೆ || ೧ || ತನಯ ಇನಯ ಮನೆಯ ಜರಿದು | ತನುವು ಧನ ಸ್ವಜನವ ಮರೆದು || ತನಗೆ ತಾನು ಸೋತು ಬಂದ | ಜನರ ಪೊರವೆನೆನುತ ಮಧುಪ || ೨ || ತನ್ನ ವಿರಹ ಘನ್ನ ಬಾಧೆ | ಗಿನ್ನು ಮರುಳುಗೊಂಡು ಭೋಜ್ಯ || ಅನ್ನಪಾನವನ್ನು ತೊರೆದ | ವನ್ನಿತೇರ ಮನ್ನಿಪುದಕೆ || ೩ || ಸ್ಮರನಶರಕೆ ಮರುಗಿ ಸೊರಗಿ | ಸ್ಮರಣೆತಪ್ಪಿ ಧರಣಿಗೊರಗಿ || ಇರುಳು ಹಗಲೀಪರಿಯುಲಳುವ | ಶರಣಜನರ ಕರುಣಿಪುದಕೆ || || ೪ || ಮಧುರೆ ಧೊರೆಯ ಸದದು ತಾನೆ | ಅಧಿಪನಾಗಿ ಅದನು ಬಿಟ್ಟು || ಮದನಶಾಸ್ತ್ರ ಮರ್ಮವರಿತ | ಚದುರತನವ ಸುದತೇರಗಲಿ || ೫ || ಗೊಲ್ಲವಂಶದಲ್ಲಿ ಪುಟ್ಟಿ | ಕಳ್ಳತನದಿ ಪಾಲುಮೊಸರು || ಮೆಲ್ಲುತದನು ಮೆಲ್ಲನದನು ಶ್ರೀ | ನಲ್ಲನೆಮ್ಮನೆಲ್ಲ ನೋಡು || ೬ || ಶ್ರವಣದಿಂದ ನಿನ್ನ ಮುಖದಿ | ಅವನ ಮಂಗಳಚರಿತೆ ಕೇಳಿ || ಸವಿದು ಧನ್ಯರಾದೆವೊ ಅಭಿ | ನವಜನಾರ್ದನವಿಠಲ ಮಧುಪ || ೭ || ಶ್ರೀಃ ||

## ೧೮೮. ರಾಗ ಕಾಂಬೋಧಿ, ಝಂಪೆತಾಳ.

ಹರಿಸ್ಮರಣೆಯೆಂಬ ಈ ಹಿರಿಪುತ್ರನಿರಲಿಕೇ | ನರಪುತ್ರರಿಂದ ಗತಿಯಾಗುವದೆ ಮರುಳೆ || ಪಲ್ಲ || ಪೊಟ್ಟೆಯಲಿ ಹುಟ್ಟಿದವ ಮಗನು ಯೆಂದೆನಿಸುವನೆ | ಹೊಟ್ಟೆ ಕಾದಿರೆ ಹೊಲೆಯಮನೆಯನ್ನೊಗಿಸುವನೆ || ಎಷ್ಟೆಂತ ಹೇಳಲಿ ಕಷ್ಟ ನಿಷ್ಠುರವನ್ನು | ಬಟ್ಟಬೈಲು ಸಂಸಾರ ಸಖ್ಯವಲ್ಲ ಮನುಜಾ || ೧ || ಜರೆಬಂದ ಕಾಲಕ್ಕೆ ಜರೆಯುವರು ಸತಿಸುತರು | ಹೊರಗೊಳಗು ಅಸಹ್ಯವೆನಿಸಿಕೊಂಬುವರು || ಅರಿ ಯಮನವರು ಬಂದು ಗುದ್ದಿಯೆಳದ್ಯೊವಾಗ | ನರಹರಿಯ ನಾಮವು ದೊರಕೊಳಲುಬಹುದೆ || ೨ || ಸಂತತವು ಹರಿನಾಮ ಅನುದಿನವು ನೆನೆಯದೆ | ಚಿಂತಿಸುವುದೇಕೊ ನೀನನ್ಯವಿಷಯವನೂ || ಕಂತುಪಿತನ ನೆನವು ಕೈವಲ್ಯಸಾಧನವು | ಯೆಂತು ಪೇಳುವೆನು ಅನಂತಮೂರುತಿ ಕೃಷ್ಣ || ೩ || ಶ್ರೀ೪ ||

## ೧೮೯. ರಾಗ ನವರಸಕನ್ನಡ, ಆದಿತಾಳ.

ಭಾರತಿ ಜನನಿ ಪಾಲಿಸು | ಯೆನ್ನ | ಭಾರತೀ ಜನನಿ || ಪಲ್ಲ || ಭಾರತಿ ನಿನ್ನಯ ಕೀರುತಿ ಕೇಳಿ ನಾ | ಆರತನಾಗಿ ನಿಂದೆ | ತಾಯಿ ಯೆಂದೆ || || ಅನುಪಲ್ಲ || ಹರಿಗೆ ನೀ ಮಗಳಾದೆ ಮರುಳೆ | ಶಿರಿ | ಹರಿಗೆ ನೀ ಸೊಸೆಯಾದೆ || ಹರಿಣನಯನೆ ನಮ್ಮ ಹರಿಪದದಲಿ | ಹರಿಸುವದೆತ್ತೆತ್ತ | ಹರಿಸದೆ ಚಿತ್ತ || ೧ || ಶ್ರದ್ಧನಾಮಕೆ ನಿನ್ನ ಪದದಿ | ಮಹ | ಶ್ರದ್ಧೆಯ ಕೊಡುಮುನ್ನ || ರುದ್ರಾದಿ ಸುರರಿಗೆ ಭದ್ರದಾಯಕಳೆ ಸು | ಭದ್ರೆ ಜಗನ್ಮಾತೆ | ವಿಖ್ಯಾತೆ || ೨ || ಜ್ಞಾನಮಯಾಕಾಯಳೆ ಸರ್ವದಾ | ಶುಕ್ಲ | ಶೋಣಿತರಹಿತಳೆ || ಶ್ರೀನಿಧಿ ಅಭಿನವ ಜನಾರ್ದನವಿಠಲ | ಕಾಣಿಸುವನು ಹ್ಯಾಂಗೆ | ಮಾಡ್ಯಾಂಗೆ || ೩ || ಶ್ರೀ೪ ||

## ೧೯೦. ರಾಗ ಜುಂಜೂಟಿ, ಆದಿತಾಳ.

ಕೋಡೊ ಕೋಡೊ ಗಿಡವೇರಿದ್ಯಾತಕೊ | ಉಡುವ ಉಡಿಗೆ ಬಿಸುಟ್ಟಿಸಾಕೊ || ಪಲ್ಲ || ಪಡೆದ ತಾಯಿತಂದೆಗಳಿಗಲ್ಲದೆ ನಿ | ನ್ನೊಡುಗಾಟಿಕೆ

ದ್ವಾರಿಗೆ ಬೇಕೊ || ೧ || ಗತವಸನದಿ ಸರಿತದೊಳು ಮೈದೊಳ || ವತಿಶಯ ವ್ರತ ಪೇಳಿದೆ ಯಾಕೋ || ೨ || ಗೌರಿಯ ನೋಹ್ಯೆನುತ ನೀರೊಳು ನಿಂತರೆ | ಪೋರಾಟಿಕೆ ಯೆಮ್ಮೊಳು ಯಾಕೋ || ೩ || ವಲಿವಳಿ ಗೌರಿ ಕಳದು ವಸನ ವೈ | ದೊಳವದು ಕರ್ಮಪಥಕೆ ಹೋಕೊ || ೪ || ಮೊರೆಯೈದಿದ ಈಶರಣಾಗತರನಾ | ನಿರುಪಾಧಿಕ ಮಾಡದೆ ಸಾಕೋ || ೫ || ಹೊರಗೆ ಬಂದು ಕರವೆರಡು ಮುಗಿಯೆ ನಿ | ಮ್ಮರುವೆಯಿೞಕ್ಷಣ ಕೊಡುವೇನವಕೋ || ೬ || ಅಭಿನವಜನಾರ್ದನವಿಠಲ ನಿನ | ಗಭಿನಮಿಪೆವು ವಸನವ ಹಾಕೋ || ೭ || ಶ್ರೀ ||

॥ ಶ್ರೀಮಧ್ವೇಶಾರ್ಪಣಮಸ್ತು ॥

## ೧೯೧. ರಾಗ ಕಲ್ಯಾಣಿ, ಆದಿತಾಳ.

ಗಂಡ ಬಂದನೆಲೋ ರಂಗಾ | ಯೆನ್ನ | ಗಂಡ ಬಂದನೆಲೋ ರಂಗಾ || || ಪಲ್ಲ || ಕಂಡರೆ ಒಗತನ ಭಂಗಾ | ಯೆನ ಗಂಡ || ಅನುಪಲ್ಲ || ಬಾಗಿಲ ತೆಗೆಯೆಂದಾರ್ಭಟದಿಂವಲಿ | ಕೂಗುವ ಧ್ವನಿ ಕೇಳ್ಳೈ ಇದಕೋ || ಹ್ಯಾಗೆ ಮಾಡಲಿ ಹಾದಿಯ ಮನೆಯೆನ | ಗಾಗದವರು ಬಂದೀಗ ನಗುವರೆನ್ನ || || ೧ || ನಂದಗೋಕುಲದಿ ನಾನೇ ಗರತಿಹೆ | ಯೆಂದು ಮೆರವುತ್ತಿರಲೀಗ || ಬಂಧು ಬಳಗದೊಳು ಬಂಡಳಾಗಿ ಯೆಂ | ದೆಂದಿಗೂ ತಲೆಯೆತ್ತಿ ತಿರುಗದಂತೆ ಯೆನ್ನ || ೨ || ದಕ್ಕಲಿಲ್ಲ ಮನದೊಳಗೆ ಮಾಡಿಕೊಂ | ಡಕ್ಕರ ತೀರಲಿಲ್ಲವು ಮುನ್ನಾ || ಘಕ್ಕನೆ ಗೋವಳ ಬರಬಹುದೆ ಒಳ | ಸಿಕ್ಕಿದೆವಲ್ಲವೊ ಶ್ರೀದವಿಠಲ ಯೆನ್ನಾ || ೩ || ಶ್ರೀ ||

## ೧೯೨. ರಾಗ ತೋಡಿ, ಆದಿತಾಳ.

ರೂಪ ತೋರಿಸೊ | ರಂಗ ನಿಜ | ರೂಪ ತೋರಿಸೋ || ಪಲ್ಲ || ರೂಪ ತೋರಿಸೊ ರತಿಪತಿಜನಕ | ಗೋಪ ಮನೆಗೆ ಬರುವನಕಾ || ಅನುಪಲ್ಲ || ಕೇವಲ ಕಲ್ಪದ್ರುಮನಹುದೆಂದು | ಭಾವಿಸುವೆನೊ ನೀನಿಂದು || ೧ || ಅಣುಮಹದಘಟಿತಾಘಟಿತ ಚತುರನೆ | ಪ್ರಣತಕಾಮದನು ನೀನೇ || ೨ || ಶ್ರೀದವಿಠಲ ಶರಣು ಯೆನೆ ಕೇಳೊ | ಪಾದಕ್ಕೆರಗುವೆ ಕೃಪಾಳೋ || ೩ ||

## ೧೯೩. ರಾಗ ಕಾಪಿ, ಆದಿತಾಳ.

ವಂದಿಸುವೆನು | ವಾದಿರಾಜಗೇ || ಪಲ್ಲ || ಸದಾ ನಿನ್ನ ಯ | ಪದಕಂಜವ || ವಂದಿಸುವೆನು || ಅನುಪಲ್ಲ || ಶ್ರೀನಿವಾಸನಾ | ಮನಮುಟ್ಟಿನಾ | ಗಾನವಮಾಡುವ | ಜ್ಞಾನವೀವುದು || ೧ || ಕೋಮಲಾಂಗನೇ ಕಾಮಭಂಗನೇ | ಕಾಮಿತಾರ್ಥದಾ | ಕಾಮಧೇನುವೇ || ೨ || ಘನ್ನ ಲಕ್ಷ್ಮೀಶ | ವೆಂಕಟಾವಿಠ | ಲನ್ನ ದಾಸನೇ | ಯೆನ್ನ ಪಾಲಿಸು || ೩ ||

## ೧೯೪. ರಾಗ ಮೋಹನ, ಏಕತಾಳ.

ವಂದಿಸುವೆನು ಶ್ರೀಗಣರಾಯಾ || ಪಲ್ಲ || ಸುರಮುನಿಸನ್ನುತ ಸಂತತ ಚರಿತಾ | ವರಪಾರ್ವತಿಸುತ ಪಂಕಜಸೂರ್ಯಾ || ೧ || ಮಹಮರಿತ ಹಾರಿಮೂರ್ತಿಶರೀರಾ | ಮಹಗಂಗೆಯ ವಕ್ಷಪ್ರವೇಶಾ || ೨ || ತಂದೆ ಶ್ರೀಗುರುಮಧ್ವೇಶವಿಠಲ ಆ | ನಂದ ಕವೀಶ್ವರಗಾವ ಮುನಿವಾಸಾ || ೩ ||

## ೧೯೫. ರಾಗ ಸೌರಾಷ್ಟ್ರ, ಝಂಪೆತಾಳ.

ಜಯಮಂಗಳಂ ನಿತ್ಯ ಶುಭಮಂಗಳಂ || ಪಲ್ಲ || ಆದಿನಾರಾಯಣಗೆ ಶ್ರೀಲಕ್ಷ್ಮೀರಮಣಗೆ | ಕ್ಷೀರವಾರಿಧಿಯಲ್ಲಿ ನೆಲಸಿಪ್ಪಗೆ || ಆಲದೆಲೆಯಲಿ ಮಲಗಿ ಲೋಲನಾಗಿದ್ದವಗೆ | ಕಾರುಣ್ಯಮೂರ್ತಿ ವೇಂಕಟರಮಣಗೇ || || ೧ || ದಶರಥನ ಸುತನಿಗೆ ಅಸುರಸಂಹಾರಗೆ | ಹೆಸರು ಸೀತಾರಾಮನೆನಿಸಿಪ್ಪಗೆ || ಕುಶಲದಲಿ ಸೇತುವೆಯ ಕಟ್ಟಿ ನಡದಾತಗೆ | ಪಶುಪತಿಯ ಪ್ರೀಯ ವೇಂಕಟರಮಣಗೆ || ೨ || ಗೋಕುಲದಲುದಿಸಿದಗೆ ಗೋವುಗಳನು ಕಾಯ್ದವಗೆ | ಗೋಪಾಲ ಶ್ರೀಕೃಷ್ಣನೆನಿಸಿಪ್ಪಗೆ || ಹದಿನಾಲ್ಕು ಲೋಕವನು ಬಾಯಲ್ಲಿ ತೋರಿದಗೆ | ಸಾಕ್ಷಾತು ತಿರುಪತಿ ವೇಂಕಟರಮಣಗೆ || ೩ || ಶುಕ್ರವಾರದ ಪೂಜೆ ಪುಳಕಾಭಿಷೇಚಿಸಿ | ಪುಷ್ಕರಣಿಯಲ್ಲಿ ಸ್ನಾನವನೆ ಮಾಡಿ || ಅರ್ತಿಯಲಿ ತೀರ್ಥಪ್ರಸಾದ ಪಾನವ ಮಾಡಿ | ಸುತ್ತೀರು ಗರುಡ ಕಂಬದ ಜ್ಯೋತಿಯಾ || ೪ || ಅಂಗವಂಗ ಕಳಿಂಗ ಕಾಶ್ಮೀರದೇಶದಿ | ಮಥುರ ಮಾಗಡಿ ಯಾರಾವಡಿಯ ದೇಶ || ಉಡುಪಿ

ಶಂಕರ ಕೊಲ್ಲೂರು ಕೃಷ್ಣವೇಣಿ | ಮುಡುಪುಗಳು ಬಂದ ವೇಂಕಟರಮಣಗೇ |೫|| ಶ್ರೀಶ ||

|| ಶ್ರೀಮಧ್ವೇಶಾರ್ಪಣಮಸ್ತು ||

## ೧೯೬. ರಾಗ ಸುರುಟಿ, ರೂಪಕತಾಳ.

ಮಂಗಳಾರತಿಯ ಪಾಡಿರೆ | ಮಾನಿನೀಯರು | ಜಯ || ಪಲ್ಲ || ನಾರದಾದ್ಯರಿಂದ ಪರಿವಾರಗೊಳುವಗೆ | ನವ | ಮಾರಮೋಹನಾಂಗ ಶೃಂಗಾರಮೂರ್ತಿಗೆ || ೧ || ರಂಗಧಾಮದೊಳ್ ಮೆರೆವ ಭುಜಂಗಶಯನಗೇ | ರ | ಥಾಂಗಪಾಣಿಯಾದ ಶೃಂಗಾರಮೂರ್ತಿಗೇ || ೨ || ಈಶವಂದ್ಯನಾದ ಕಮಲೇಶವಿಠಲಗೆ |ರ| ಮೇಶನಾದ ಶ್ರೀಪರಾವಾಸುದೇವಗೇ || ೩ ||

## ೧೯೭. ರಾಗ ಸೌರಾಷ್ಟ್ರ, ಮಟ್ಟೆತಾಳ.

ಮಂಗಳಂ | ಜಯ | ಮಂಗಳಂ || ಪಲ್ಲ || ವನಧಿ ಲಂಘಿಸಿ ಆಚೆಗೆ ಪೋಗಿ | ಜನಕನಂದನೆಗೆ ಮುದ್ರಿಕೆಯನಿತ್ತು || ವನವ ಕಿತ್ತೀಡಾಡಿ ಲಂಕೆಯ ಸಖಿಗಿತ್ತ | ಘನಪರಾಕ್ರಮವುಳ್ಳ ಹನುಮಂತಗೇ || ೧ || ಸೋಮಕುಲದಲಿ ಜನಿತನಾಗಿ | ಕಾಮನಯ್ಯನ ಚರಣವ ಭಜಿಸೀ || ಆಮಹ ಬಕ ಕೀಚಕ ದುರ್ಯೋಧನರ | ಸ್ತೋಮವನಳಿದ ಭೀಮರಾಯಗೇ || ೨ || ಮಧ್ಯಗೇಹನ ಉದರದಿ ಜನಿಸೀ | ಅದ್ವೈತಮತವ ಕಿತ್ತೀಡಾಡಿ || ಸಿದ್ಧಾಂತ ಸ್ಥಾಪಿಸಿ ಮೋಹನವಿಠಲನ | ಪಾದಪದ್ಮವ ಭಜಿಸಿದ ಮಧ್ವರಾಯಗೆ || ೩ || ಶ್ರೀಶ ||

## ೧೯೮. ರಾಗ ಭೈರವಿ, ಝಂಪೆತಾಳ.

ಜಯಮಂಗಳಂ ನಿತ್ಯ ಶುಭಮಂಗಳಂ || ಪಲ್ಲ || ಮಂಗಳಂ ಹಯವದನಪದಕಂಜಮಧುಪನಿಗೆ | ಮಂಗಳಂ ವಾಗ್ವಜ್ರಧಾರನೀಗೆ || ಮಂಗಳಂ ವಾಗೀಶಕರಕಂಜಜಾತನಿಗೆ | ಮಂಗಳಂ ಗುರುವಾದಿರಾಜರಾಯರಿಗೆ || ೧ || ಮಂಜುಳಾಕಾರನಿಗೆ ಮಹಿತಗುಣವಂತನಿಗೆ | ಕಂಜದಳನೇತ್ರನಿಗೆ ಕಾಮಾರಿಗೇ || ಅಂಜನೇಯಸುತಮತಗೆ ಅನುಕೂಲವಾದವಗೆ | ರಂಜಿಸೀಮುನಿವರ್ಯ ದ್ವೈತಧೀರನಿಗೇ || ೨ || ಪರಿಪರಿ ಚರಿತ್ರನಿಗೆ ಪರಿಪೂರ್ಣ ಚಿತ್ಸುಖಗೆ | ಪರಮಹಂಸಾಚಾರ್ಯ ಗುರುವರ್ಯಗೇ || ಶರಣ

ಜನಪಾಲಕಗೆ ಸದ್ಧರ್ಮ ನಿರತನಿಗೆ | ಉರಗಭೂಷಣನಂತೆ ಊರ್ಧ್ವ ಪುಂಡ್ರವನು ಧರಿಸಿ ಮೆರೆವವಗೆ || ೩ || ವಿಶ್ವನಾಧಾರನಿಗೆ ವಿಜಿತಾರಿವರ್ಗನಿಗೆ ಅದ್ವೈತಮತಹರಗೆ ಆಶ್ಚರ್ಯಗೇ || ಊರ್ಧ್ವಪುಂಡ್ರಾಂಕಿತಗೆ ಉತ್ಕೃಷ್ಟ ತೇಜನಿಗೆ | ಮುಷ್ಟು ಹಯವದನನ್ನ ಮುದದಿಂದ ಪೂಜಿಪಗೆ || ೪ ||

೧೯೯. ರಾಗ ಸುರುಟಿ, ಮಟ್ಟಿತಾಳ.

ಮಂಗಳ ಗುರು ರಾಘವೇಂದ್ರಗೆ | ಜಯ | ಮಂಗಳ ಸುಜನಾಂಬುಧಿ ಚಂದ್ರಗೆ || ಪಲ್ಲ || ಶ್ರೀಸುಧೀಂದ್ರ ಸುಕುಮಾರಗೆ ಮಂಗಳಾ | ಭೂಸುರ ಸುತಮುಷಿಮುಗೆ ಮಂಗಳಾ || ವೈತಿಕಕುಲವನಜಾತಗೆ ಮಂಗಳಾ | ಭಾಸುರಕೀರ್ತಿಯ ಪಡೆದವಗೆ || ೧ || ವೃಂದಾವನ ದಿವಿಯೊಳಗೆ ಸುರದ್ರುಮ | ದಂದದಿ ರಾಜಿಸುವಗೆ ಮಂಗಳಾ || ಅಂಧಪಂಗು ಮೂಕಬಧಿರ ರೋಷ್ಟಿತ ಗಳ | ಸಂದೋಹವ ಸಲಿಸುವ ಮುನಿಗೆ || ೨ || ಭೂತಪ್ರೇತ ವೇತಾಳ ಭಯವಿಪಿನ | ಪೀತಿಹೋತ್ರನೆನಿಪಗೆ ಮಂಗಳಾ || ವಾತಜನಕ ಜಗನ್ನಾಥವಿಠಲನ | ಪ್ರೀತಿಲಿ ಸಲಹುವ ದಾತನಿಗೆ || ೩ || ಶ್ರೀ ||

೨೦೦. ರಾಗ ಯದುಕುಲಕಾಂಬೋಧಿ, ಧ್ರುವತಾಳ.

ಹಯವದನಾ ತನ್ನಾ | ಪ್ರಿಯಳಾದ ಲಕುಮಿಗೆ | ಜಯವಿತ್ತ ಕ್ಷೀರಾಂಬುಧಿಯಲ್ಲಿ || ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ | ದಯದಿ ನಮ್ಮೆಲ್ಲರಾ | ಸಲಹಲಿ || ಶೋಭಾನೆ || ಶ್ರೀ ||

|| ಶ್ರೀಮಧ್ವೇಶಾರ್ಪಣಮಸ್ತು ||

|| ಶ್ರೀಭೈಷ್ಮೀಸತ್ಯಾಸಮೇತ ಶ್ರೀಗೋಪಾಲಕೃಷ್ಣಾಯ ನಮಃ ||

ಹನುಮದ್ಭೀಮ ಮಧ್ವಾಂತರ್ಗತ ರಾಮಕೃಷ್ಣ ವೇದವ್ಯಾಸಾತ್ಮಕ ಮಧ್ವಪತಿಃ...

|| ಶ್ರೀಗೋಪಾಲಕೃಷ್ಣಃ ಪ್ರಿಯತಾಮ್ ||

# ದಾಸರಪದಗಳು ಸಂಪೂರ್ಣವು.

|| ಶ್ರೀಕೃಷ್ಣಾರ್ಪಣಮಸ್ತು ||

